# ಕ್ಷಾತ್ರ ದರ್ಶನ

(ಮಿಶ್ರ ಛಂದ ಕಾವ್ಯ)

---

ಅ. ಗೌ. ಕಿನ್ನಿಗೋಳಿ.



*"Those who make nothing new destroy."*
—Masefield.

ಬಾಲಸಾಹಿತ್ಯ ಮಂಡಲ,
ಮಂಗಳೂರು-೩.

೧೯೫೯

# ಮುನ್ನುಡಿ

ಇದೊಂದು ಸೊಗಸಾದ ಕವಿತೆ. ರಚಕರನ್ನು ಮನವಾರೆ ಅಭಿನಂದಿಸುತ್ತೇನೆ.

*A good play needs no epilogue* ಎಂದು ಶೇಕ್ಸ್‌ಪಿಯರನು (Shakespear) ಹೇಳಿರುವ ಮೇರೆಗೆ ಚಲೋದಾದ ನಾಟಕಕ್ಕೆ ಹಿನ್ನುಡಿ ಬೇಡವೆಂದಾದರೆ, ಇಂಥಾ ಸೊಗಸಾದ ಕವಿತೆಗೆ ಮುನ್ನುಡಿ ಬೇಕಾಗಿಲ್ಲ. ಆದರೂ ರಚಕರು ಮುನ್ನುಡಿ ಬೇಕೆಂದರು. ಆ ಶಾಸ್ತ್ರವನ್ನು ಇಲ್ಲಿ ಮಾಡುತ್ತೇನೆ.

ಈ ಕವಿತೆಯಲ್ಲಿ ಜೈಮಿನಿಭಾರತದ ಬಭ್ರುವಾಹನನ ಕಥೆಯನ್ನು ಕವನಿಸಿದೆ. ಆದರೆ ಬದಿಗಣ್ಣು ಕಟ್ಟಿದ ಕುದುರೆಯಂತೆ ತುದಿಯಿಂದ ತುದಿವರೆಗೆ ಪೌರಾಣಿಕ ಕಥನದ ತುಳಿತುಳಿದ ದಾರಿಯನ್ನೇ ಹಿಡಿಯದೆ, ರಚಕರು ಅಲ್ಲಲ್ಲಿ ಸೀಳುಹಾದಿಗಳಲ್ಲಿ ಸಾಗಿರುವ ಹೊಸತನವಿದೆ. ಆಬಗ್ಗೆ ಒಂದೇ ಉದಾಹರಣೆಯನ್ನು ಕೊಡುವುದಾದರೆ, ಬಭ್ರುವಾಹನನ ಬಾಣ ಹತಿಯಿಂದ ಅರ್ಜುನನು ಉರುಳಿಬೀಳಲು, ಚಿತ್ರಾಂಗದೆ ತನ್ನ ಜೀವರಕ್ತವನ್ನು ಆತನ ನಾಡಿಗಳಲ್ಲಿ ಬಸಿಯಗೊಟ್ಟು, ತನ್ನ ಪ್ರಾಣ ತೆತ್ತು ಆತನಿಗೆ ಪ್ರಾಣವಿತ್ತಳು ಎಂದು ಇಲ್ಲಿದೆ (ಪು. ೪೮, ೫೩-೫೪). ಜೈಮಿನಿಭಾರತದಲ್ಲಾದರೆ, ಶ್ರೀ ಕೃಷ್ಣನು ಮಣಿಪುರಕ್ಕೆಯ್ದಿ ಅರ್ಜುನನನ್ನು ಮರುಜೀವಿಸಿದನೆಂದಿದೆ. ಈ ಮಾರ್ಪಾಟದಿಂದ ಶ್ರೀ ಕೃಷ್ಣನ ಪೂರ್ಣಾವತಾರತ್ವಕ್ಕೆ, ಆತನ ದೇವತ್ವಕ್ಕೆ ಏತರ ಕೊರತೆಯೂ ಇಲ್ಲ. ಏಕೆಂದರೆ, ಚಿತ್ರಾಂಗದೆಯ ರಕ್ತದಾನದಿಂದಲೇ ಅರ್ಜುನನು ಸಪ್ರಾಣಿಸಿದನೆಂದಾದರೆ, ತನ್ನ ನೆತ್ತರನ್ನು ನೀಡಲಿಕ್ಕೆ ಆಕೆಗೆ ಬುದ್ಧಿ ಕೊಟ್ಟಾತನೂ ಕೃಷ್ಣನೆ, ಅಂದಿನ ಆಕಾಶಪತನದಿಂದ ದಿಗ್ಭ್ರಾಂತನಾದ ಬಭ್ರುವಾಹನನಿಗೆ ಆ ರಕ್ತ ಪೂರಣವನ್ನು ಮಾಡಬಲ್ಲ ವೈದ್ಯನನ್ನು ನೆನವರಿಸಿಕೊಟ್ಟಾತನೂ ಕೃಷ್ಣನೇ ಎಂಬ ಸತ್ಯವನ್ನು ಆಸ್ತಿಕರು ಹೇಳದೆ ಬಲ್ಲರು. ಹೇಗೂ ಇದೊಂದು ತೀರ ಹೊಸ ಸನ್ನಿವೇಶ, ಜೈಮಿನಿ ಮನಗಾಣದ, ಲಕ್ಷ್ಮೀಶನು ಕನಗಾಣದ ಸನ್ನಿವೇಶ.

ಹೊಸ ಸನ್ನಿವೇಶವೇ ಅಲ್ಲ, ಅದೊಂದು ವಿಸಂಗತಿಯೂ (anachronism) ಸರಿ. ಏಕೆಂದರೆ ಯುಧಿಷ್ಠಿರನು ಪಟ್ಟಾಭಿಷಿಕ್ತನಾಗಿ ಇಂದಿಗೆ ಸಂದ

೫೦೦೦ ಚಿಲ್ಲರೆ ವರ್ಷಗಳ ಹಿಂದಣ ಭಾರತವರ್ಷದಲ್ಲಿ, ಅಂದಿನ ಭಾರತೀಯ ವೈದ್ಯದಲ್ಲಿ ರಕ್ತಪೂರಣದ ಸಂಪ್ರದಾಯ ಇದ್ದಿರಲಿ, ಇಲ್ಲದಿರಲಿ, ಈ ಕವಿತೆಯಲ್ಲಿ ಪ್ರಸ್ತಾವಿಸಿರುವ ರಕ್ತದಾನವಾತೂ ಪಾಶ್ಚಾತ್ಯರ ದ್ವಾರಾ ಇಲ್ಲಿ ಪ್ರಚಾರಕ್ಕೆ ಬಂದ ಕ್ರಮು ತಾನೆ ಎಂಬಲ್ಲಿ ಲೇಶಮಾತ್ರವೂ ಸಂದೇಹವಿಲ್ಲ. ಆ ಕಾರಣವೇ ಅದೊಂದು ವಿಸಂಗತಿ. ಆದರೆ ಇಂಥಾ ವಿಸಂಗತಿಗಳು ಬಹಳ ಹಳಗಾಲದಿಂದಲೆ ನಡೆದುಬಂದು ಸಾಮಾನ್ಯವಾದ ಕವಿಸಮಯಗಳಾಗಿ ಹೋಗಿವೆ. ನೆನಪಿಗೆ ತಟ್ಟನೆ ಮೂಡುವ ೧–೨ ಉದಾಹರಣೆಗಳನ್ನು ಹೇಳುವುದಾದರೆ– ಶಾಕುಂತಲ ನಾಟಕದಲ್ಲಿ ದುಷ್ಯಂತನ ಪತ್ನಿಯಾದ ಶಕುಂತಲೆ ಬಸುರಿಯಾಗಿ ಆತನ ಸಭೆಗೆ ಬಂದು ತನ್ನನ್ನು ಸ್ವೀಕರಿಸಬೇಕೆಂದು ಕೇಳಿಕೊಂಡಾಗ ಆಕೆಯನ್ನು ಅಲ್ಲಗಳೆದ ಆತನ ಮಹಾಪರಾಧವನ್ನು ಕಾಳಿದಾಸನು ಆತನ ತಲೆಯಿಂದ ಎತ್ತಿ ದೂರ್ವಾಸ ಋಷಿಯ ತಲೆಯ ಮೇಲೆ ಹೇರಿರುತ್ತಾನೆ; ಶೇಕ್ಸ್ಪಿಯರನ *Winter's Tale* ಎಂಬ ನಾಟಕದಲ್ಲಿ ಎಂದೂ ಕಡಲ ಕರೆಯಲ್ಲಿ ಇದ್ದಿಲ್ಲದೆ ಒಳದೇಶವೇ ಆಗಿರುವ ಬೊಹೇಮಿಯಾ (Bohemia) ಎಂಬ ರಾಜ್ಯವನ್ನು ಆ ಕವಿ ನೆಟ್ಟಗೆ ಸಮುದ್ರ ತೀರದಲ್ಲಿ ಊರಿರುತ್ತಾನೆ, ಇ.ಇ. ಇಂತಹ ವಿಸಂಗತಿಗಳಿಂದ ಕವಿತೆಯ ಘಟನೆಗೆ ಏನೂ ತೊಡಕಾಗುವಂತಿಲ್ಲ.

ಈ ಕವಿತೆಯಲ್ಲಿ ಅಲ್ಲಲ್ಲಿ ಬರುವ ಚಲೋದಾದ ಅಲಂಕಾರೋಕ್ತಿಗಳು–

(೧) ಖಂಡೆಯುವ ಬಚ್ಚಿಡುವ ಒರೆಯು ಮಾರ್ದವದಂತೆ (ಪುಟ ೫),

(೨) ಕುಲದ ಗೌರದ್ಯುತಿಯು ನೆರಳಿನಂತೆ (ಪು. ೬),

(೩) ಮನೆಯು ಮೂಲೆಯಲಲ್ಲೊ ನಾರುತಿದ್ದರೆ ಧೂಪ ಉರಿಸುವುದು ಸಾಜ ಮಂದಿ! (ಪು. ೨೬)

(೪) ಕಸಿಕರದ ಸೋಗೊ? ಕರಿಚೇಳ ಬಾಲದ ಬಾಗೊ? (ಪು. ೨೩),

(೫) ಕಂಗಳೊಳಾವುದೆರಡಲಿ ಮುಖ್ಯವು? (ಪು. ೩೪),

ಇ.ಇ. ಇವೆಲ್ಲವೂ ಮನೋಜ್ಞವಾಗಿವೆ, ಕವಿಯ ಕಲ್ಪನಾಶಕ್ತಿಯನ್ನು (imagination) ಸ್ಫುಟವಾಗಿ ದ್ಯೋತಿಸುತ್ತವೆ.

ಹೀಗೆ ಇದೊಂದು ತುಂಬ ಸೊಗಸಾದ ಕವಿತೆ. ಈ ಕವಿಗೆ, ಇವರ ಕವಿತಾಶಕ್ತಿಗೆ ಹುಲುಸಾದ ಭವಿಷ್ಯವಿದೆ. ಆ ಭವಿಷ್ಯವನ್ನು ದೇವರು ಕಾಪಾಡಲಿ, ಉತ್ತರೋತ್ತರವಾಗಿ ಬೆಳಗಲಿ ಎಂದು ಕೋರುತ್ತೇನೆ. ಇತಿ ಶಮ್.

**ಗೋವಿಂದ ಪೈ.**

## —ಕುರಿತು

'ಕ್ಷಾತ್ರದರ್ಶನ'ವಿದು ಎರಡನೆಯ ಆವೃತ್ತಿಯಾಗಿ ಹೊರಬರುತ್ತಿರುವಾಗ ಈ ಕೃತಿಗೆ ದೊರೆತ ನೆರವನ್ನೂ, ನೆರವುಗಾರರಾದ ಸಹೃದಯಿಗಳನ್ನೂ ಕೃತಜ್ಞತೆಯಿಂದ ನೆನೆಯುತಿದ್ದೇನೆ.

ಯುಗಪುರುಷ ಮಾಸಪತ್ರಿಕೆಯ ಸಂಪಾದಕರೂ ಪ್ರಕಾಶಕರೂ ಆಗಿರುವ ಮಿತ್ರ ಕೊ. ಅ. ಉಡುಪರು ಇದನ್ನು ತಮ್ಮ ಪ್ರಕಟನಾಲಯದ 'ಮೊದಲ ಮುತ್ತೆ'ಂದು ೧೯೫೪ರಲ್ಲಿ ಪ್ರಕಾಶಿಸಿದ್ದರು. ಕಾವ್ಯ ಪ್ರಕಾಶನದ ಕಷ್ಟನಷ್ಟಗಳು ನಮ್ಮ ಕರ್ನಾಟಕದಲ್ಲಿ ಎಷ್ಟಿವೆಯೆಂದು ತಿಳಿದಿದ್ದರೂ ಅವರು ಈ ರೀತಿಯಿಂದ ಆತ್ಮೀಯತೆ ತೋರಿರುವುದು ಕೇವಲ ಅವರ ಸೌಜನ್ಯದಿಂದಲ್ಲದೆ ಬೇರೆಯಲ್ಲವೆಂದು ತಿಳಿಯುತ್ತೇನೆ.

ರಾಷ್ಟ್ರಕವಿ ಗೋವಿಂದ ಪೈಗಳು ಬೆಲೆಯುಳ್ಳ ಮುನ್ನುಡಿಯಿಂದ ಶುಭವನ್ನು ಕೋರಿ ಹರಸಿದ್ದಲ್ಲದೆ, ಶ್ರೀ ಪುತ್ತೂರು ಪುಟ್ಟಣ್ಣ ಸೆಟ್ಟಿ, ವಿದ್ವಾನ್–ಅವರು ಅಮೂಲ್ಯ ಸೂಚನೆಗಳನ್ನಿತ್ತು ಕೃತಿಯನ್ನು ಚೆನ್ನಾಗಿಸಿದ್ದರು. ನಾಡಿನ ಹೆಚ್ಚಿನ ಎಲ್ಲ ಪತ್ರಿಕೆಗಳ ವಿಮರ್ಶಕರು ಇದನ್ನು ಮುಕ್ತವಾಗಿ ಶ್ಲಾಘಿಸಿ ಧೈರ್ಯವಿತ್ತರು. ಮೈಸೂರು ಸರಕಾರದ ವಯಸ್ಕರ ಶಿಕ್ಷಣ ಶಾಖೆಯು ಹಳೆಯ ಮೈಸೂರಿನ ಎಲ್ಲ ಪುಸ್ತಕ ಭಂಡಾರಗಳಿಗಾಗಿ ಈ ಕೃತಿಯ ಪ್ರತಿಗಳನ್ನು ಪಡೆದುಕೊಂಡಿತು.

ಮದ್ರಾಸು ವಿಶ್ವವಿದ್ಯಾನಿಲಯದ ಎಸ್. ಎಸ್. ಎಲ್. ಸಿ. ಪಠ್ಯದಲ್ಲಿಯೂ ಇತರರ ಪಠ್ಯಗಳಲ್ಲಿಯೂ ಇದರ ಭಾಗಗಳು ಉದ್ಧೃತವಾದವು. ಮದ್ರಾಸಿನ 'ಸ್ಕೂಲ್ ಬುಕ್ ಎಂಡ್ ಲಿಟರೇಚರ್ ಸೊಸೈಟಿ'ಯು ಉತ್ತಮ ಕೃತಿಯೆಂದು ಸಂಭಾವನೆಯಿತ್ತು ಗೌರವಿಸಿತು. ಮತ್ತೊಮ್ಮೆ ಮದ್ರಾಸು ವಿಶ್ವವಿದ್ಯಾನಿಲಯದವರು ೧೯೫೭ನೆ 'ಪ್ರೀ ಯುನಿ

ವರ್ಸಿಟಿ ಕೋರ್ಸ್‌ಗೆ ಈ ಕ್ಷಾತ್ರದರ್ಶನವನ್ನು ಪಠ್ಯವೆಂದು ಆರಿಸಿ ಕೊಂಡರು. ಮೊನ್ನೆ ಮೊನ್ನೆ ಮದ್ರಾಸು ಸರಕಾರದ ಪರವಾಗಿ ಮೈಸೂರು ಸರಕಾರದ ಸಂಭಾವನೆಯೂ ದೊರೆಯಿತು. ಹೀಗೆ ಈ ಕೃತಿಗೆ ಎಲ್ಲೆಡೆಗಳಿಂದಲೂ ಮೆಚ್ಚುಗೆಯನ್ನು ವ್ಯಕ್ತಗೊಳಿಸಿದ ಸಹೃದಯಿಗಳೆಲ್ಲವರಿಗೂ ನಮ್ರ ವಂದನೆಗಳನ್ನು ಅರ್ಪಿಸುತ್ತೇನೆ.

ಕಥನ ಕಾವ್ಯಗಳ ಕಾಲ ಆಗಿಹೋಯಿತು– ಎನ್ನುವವರಿದ್ದಾರೆ. ಆ ಮಾತನ್ನು ಒರೆಹಚ್ಚಿ ನೋಡುವ ಹಟ ನನ್ನದಲ್ಲ. ಆ ವ್ಯವಧಾನವೂ ನನ ಗಿಲ್ಲ. ಒಂದೊಮ್ಮೆ ಕಥನ ಕಾವ್ಯಗಳ ಕಾಲ ಮುಗಿಯಿತೆಂದಾ ದರೆ ಬಹುಶಃ ಎಲ್ಲ ಕಾವ್ಯಗಳ ಕಾಲವೂ ಮುಗಿದಂತೆಯೇ ಸರಿ– ಎನ್ನುವವರೂ ಇಲ್ಲದೆ ಇಲ್ಲ. ನಾನಂತೂ ಹಣ್ಣನ್ನೂ ಕತ್ತಿಯನ್ನೂ ಒಟ್ಟಾಗಿಯೇ ಕಾವ್ಯಪ್ರಿಯರ ಮುಂದಿರಿಸಿದ್ದೆ. ಅಂಥವರು ಎದೆ ಯಾರೆ ಆಸ್ವಾದಿಸಿದ್ದರು. ಅದೊಂದು ಸಮಾಧಾನವಾದರೂ ನನ ಗಿದ್ದುದರಿಂದಲೇ ನನ್ನ ಅನಂತರದ ಕಥನ ಕಾವ್ಯಗಳನ್ನು ಪ್ರಕಾಶಿ ಸಲು ನಾನು ಧೈರ್ಯಗೊಳ್ಳುವಂತಾಯಿತು. ಆಗಲೂ ನಾನು ಪಡೆದ ಆದರಕ್ಕೆ ತೀರಾ ಕೃತಜ್ಞ.

ಇದರ ಎರಡನೆಯ ಆವೃತ್ತಿಯ ಹೊಣೆಯನ್ನು ಹೊತ್ತಿರುವ ನಮ್ಮ ಜಿಲ್ಲೆಯ ಹೆಸರಾಂತ ಪ್ರಕಾಶಕ ಸಂಸ್ಥೆ– ಬಾಲಸಾಹಿತ್ಯ ಮಂಡಲದ ಶ್ರೀ ಸುಮಿತ್ರ ಭಟ್ಟರಿಗೆ ನಾನು ಉಪಕೃತನಾಗಿದ್ದೇನೆ. ಕಿನ್ನಿಗೋಳಿಯ ಆನಂದ ಪ್ರಿಂಟಿಂಗ್ ವರ್ಕ್ಸ್ ಸಂಸ್ಥೆಯು ಎಂದಿನಂತೆ ತನ್ನ ಮುದ್ರಣ ಕಾರ್ಯದ ಅಚ್ಚುಕಟ್ಟನ್ನು ಈ ಬಾರಿಯೂ ಕಾಯ್ದುಕೊಂಡುದು ಸ್ತುತ್ಯ.

—ಅ. ಗೌ. ಕಿ.

# ಕ್ಷಾತ್ರ ದರ್ಶನ

[ನೋಟ ಒಂದು]

೧

'ಗುರುವು ಶಿಷ್ಯನಲಿ ತಂದೆಯು ತನ್ನ ಮಗನಲ್ಲಿ
ಸೋಲುವುದೆ ಭೂಷಣವು' ಎನ್ನುತೊರೆದು,
ಕಾಲನಿಯಮವ ಪ್ರಕೃತಿಧರ್ಮದಾಟವ ಮರೆದು
ಹೇಳುವರು ಗಾದೆಗಳ ಕಟ್ಟಿಬಿಗಿದು!
'ಭೂತವನು ತುಳಿತುಳಿದು ವರ್ತಮಾನವು ಬಂದು,
ಅದನೊದೆಯೆ ಬರಲಿಹುದು ಭಾವಿ ಮುಂದು'
ಎಂಬುದನ್ನರಿತಿದ್ದರೂ ಮರೆಯ ಜವನಿಕೆಯ
ತೆರೆದರೇ ಕಬ್ಬಿಗರು ರೂಢಿಮುರಿದು?

೨

ಇಂದ್ರಾರಿ ದಶಕಂಧರರ ಗೆದ್ದ ಶ್ರೀರಾಮ
ದೈವಿಕದ ಮಹಿಮೆಯಲಿ ಮೆರೆಮೆರೆದನು!
'ನರರೂಪಿನಿಂದ ಪರಮಾತ್ಮ ಮೈದೋರಿದನು
ಲೋಕ ಶಿಕ್ಷಣಕೆ'ಂದು ಕತೆಯ ನೇಣು-
ಹೊಸೆ ಹೊಸೆದು, ವಾಲ್ಮೀಕಿ ಕಲ್ಪನೆಯ ರೆಕ್ಕೆಯನು
ಕಟ್ಟಿಕೊಂಡೇ ಹಾರಿ ಹಾಡಿದವನು,
ಬಹುಗುಣವ ಬಿತ್ತರಿಸಿ ದೋಷಗಳ ಮುಚ್ಚಿದನು:
ಅವತಾರ ಶಿಲ್ಪವನು ಕಡೆಕಡೆದನು!

೩

ಯಾರಾದರೇನವರ ಕರ್ಮಫಲ ಬೆಂಬಿಡದೆ
ತೋರುವುದು ಕೊನೆಯಲ್ಲಿ ದೈವದಂತೆ!
ಶ್ರೀರಾಮನಾದರೂ ಕೊಂದ ಪಾಪವ ಕಳೆಯೆ
ಕೊಲುವ ಯಾಗಕೆ ಮನವ ಗೈದನಂತೆ!
ಆದರ್ಶನಾಗಲಿಕೆ ಅಶ್ವಮೇಧವೆ? ಜನಕೆ
ಆಹ! ಎರಚಿದನಲ್ತೆ ಮಂಕುಬೂದಿ!
ಸಮ್ರಾಜರನು ಕೆಡೆದು ಸಾಮಂತರನು ಗೈದು
ಮೆರೆವ ಮೋಡಿಗೆ ಕಂಡುಕೊಂಡ ಹಾದಿ.

೪

ಕಾಡಿನಲಿ ಬಳೆದ–ಕಿತ್ತಡಿಗುವರರಂತಿದ್ದ–
ಎಳೆಯರಿಬ್ಬರು ಜನ್ನಗುದುರೆ ಕಟ್ಟಿ
ಕಾದಿದರು– ದೇವ ರಾಮನೆ ಮಡಿದ!–ಮತ್ತಿದ್ದ
ಮುನಿಯ ಮಂತ್ರೋದಕದಿ ಬೋಧಹುಟ್ಟಿ!
ವ್ಯಾಸರ್ಷಿಯಾ ಸಾಮ್ಯಗೊಟ್ಟು ದ್ವಾಪರ ಕಥೆಯು
ಧರ್ಮಾನುಜನಿಗು ತಾನನ್ವಯಿಸಿದ;
'ಇತಿಹಾಸದಾವರ್ತನೆಗಳೆ ಮರುಕೊಳಿಸುವವು'
ಎಂಬ ನಾಣ್ಣುಡಿ ಸತ್ಯಸೂತ್ರ ಸಿದ್ಧ.

೫

ಧರ್ಮಯುದ್ಧದ ಮೆರಗು ಲೆಪ್ಪವನೆ ಬಳಿಬಳಿದು
ತಮ್ಮ ಹಕ್ಕೆಂದು ದುರ್ಯೋಧನಾದಿ
ದಾಯಾದಿಗಳ ಹಣೆಯ ಬೊಮ್ಮ ಬರೆಹವ ತೊಡೆದು
'ಧರ್ಮಜ'ನು– ಎನೆ ದಿವ್ಯ ನಾಮ ತಿದ್ದಿ,
ತಮ್ಮ ಪಾತಕದ ಸಂದೇಹಶಲ್ಯವು ಮನವ
ಕೊರೆಯುತಿರೆ, ಆ ಯುಧಿಷ್ಠಿರನ ಕರುಳು
ಕರುಣೆದುಂಬಿತೆ? ಮರುಗಿದನು ಬಂಧುಗಳ ನೆನೆವ
ಸೋಗಿನಲಿ ಸರ್ವರನು ಗೈದು ಮರುಳು!

೬

'ಬಯಸಿದ್ದು ಹಾಲನ್ನ ಬಡಿಸಿದ್ದು ಕ್ಷೀರಾನ್ನ'
ಎನೆ, ಯುಧಿಷ್ಠಿರನ ಗೈದರು ಸಾಂತ್ವನ–
"ಪರಮಾರ್ಥಕೆಂದು ಧನ ಸರ್ವಾರ್ಥಸಂಗ್ರಹಣ
ಗೈಯಲ್ಕೆ ಮಾಡಶ್ವಮೇಧಯಜ್ಞ!"
ಎಂದ ಹಿರಿಯರ ವಚನ ಕಿವಿಗಿಳಿಯೆ ಧರ್ಮಜನ
ಸವಿ ರಸಾಯನದಂತೆ, ಪಾಪಹರಣ
ನೆವದಲ್ಲಿ ಅರಸುತನ ಸಾಮ್ರಾಜ್ಯ ವಿಸ್ತರಣ.
ಒಂದು ಕಲ್ಲಿಗೆ ಕೆಡೆದನೆರಡು ಹಣ್ಣ!

೭

ಮೂರುಲೋಕದ ಗಂಡನೊಡನೆ ಗಾಂಡಿವಗೊಂಡ
ವೃಷಕೇತು ಮೇಘವರ್ಣರನು ಕೂಡಿ,
ದಿಕ್ಪಾಲರನು ಕೊಂದು ದಿಗ್ಬಲಿಯ ಕೊಡಲೆಂದು
'ಅನುಕೂಲಸಿಂಧು'ವನು ಮನನ ಮಾಡಿ!
ಕರ್ಪದಾಳವ ತೋಡಿ ಮೇಲೆ ಸಮಿದೆಯನೊಟ್ಟಿ
ಪರ್ವರಿಪ ಎಳೆಬಾಳೆ ಗಿಡುವ ನೆಟ್ಟು,
ಮದಕರಿಯ ಮನವೆಳೆದು ಕಂದರದಿ ಕೆಡೆವಂತೆ
ಯಾಗರಕ್ಷಣೆ 'ಪುಣ್ಯಕಾರ್ಯ'ವಾಯ್ತು!

೮

ಜನ್ನಗುದುರೆಯ ನೆತ್ತಿಯಲ್ಲಿ ಪತ್ರವ ಕಟ್ಟಿ
ಅಗ್ಗಳಿಕೆ ಬಿರುದಿನೊಕ್ಕಣೆಯ ಕೆತ್ತಿ,
ಉಗ್ಗಡಿಸಿ ಸಿಂಗರಿಸಿ ಲಗ್ಗೆಯಿಡೆ ಮುಂದಟ್ಟಿ
ನುಗ್ಗಿದರು ನಾಲ್ದೆಸೆಗೆ ಸೊಂಟಕಟ್ಟಿ!
ಯಾಗ ದೀಕ್ಷಾವ್ರತದ ಸೋಗಿನಲಿ ಧರ್ಮಜನು
ಮೂಗು ಹಿಡಿದಿದ್ದ ಗಜನಗರದಲ್ಲಿ!
ಸಾಗಿದರು ಸೋದರರು– ರಾಜ್ಯಗಳನೊತ್ತೊತ್ತಿ.
ಬಾಗಿದರ ಬೆನ್ನೇರಿ ಹಿಗ್ಗಿನಲ್ಲಿ.

೯

ವೀರತೆಯ ಬರಗಾಲವೆದ್ದ ಭೀಷಣ ಕಾಲ!
ಭೂಭುಜರ ಭುಜ ಬತ್ತಿಹೋದ ಕಾಲ!
ದೇಶದೇಶದ ವೀರ ಕೇಸರಿಗಳನ್ನೆಲ್ಲ
ಕೂಡಿ ಹದಿನೆಂಟು ಅಕ್ಷೋಹಿಣಿಗಳ,
ಸಾಲು ಮುದ್ಗರ ಶೂಲ ಕೊಂತ ಕಡಿತಲೆ ಬಿಲ್ಲ
ಝಣ ಝಣತ್ಕಾರ– ತಾಂಡವದ ಮೇಳ
ಗೈದು ಪ್ರಲಯ ಸಿದ್ಧಿ ನರ್ತನದಿ ಕಡಿಕಡಿದ
ಭಾರತಾಹವವಾಗಿ ಹೋದ ಕಾಲ!

೧೦

ಮತ್ತೆಲ್ಲಿ ವೀರತೆಯ ನೀರಧಿಯ ತೆರೆಮೊರೆಯು?
ಕ್ಷತ್ರತೇಜದ ಗುಳುಗುಳಿಸುವ ಸೊರೆಯು?
'ಹರಣವನೆ ಹುಲ್ಲಿಗೆಣೆ'– ಎನುವ ನೆತ್ತರ ಝರಿಯು?
'ವೀರ ಪಾನ'ವ ಮೋರುವಂಥ ಎದೆಯು?
ಹರಣ ಹಕ್ಕಿಯನೆದೆಯ ಹಂಜರದಿ ಹುದುಗಿಟ್ಟು
ಬಕುತಿ ಬಾಗಿಲನಿಕ್ಕಿ ಹಾರದಂತೆ
ಪದಕೆ ಮಣಿದರು– ಹೊತ್ತ ಮಕುಟವನು ಮಗುಚಿಟ್ಟು
ಅರಸು ಕುರಿಗಳು ಬಿಕ್ಕೆ ಬೇಡಿದಂತೆ!

೧೧

ಹೆದರಿ ಕಪ್ಪವ ಕೊಟ್ಟ ಸುದ್ದಿ ಸುಂಟರಗಾಳಿ
ಅದಿರಿಸಿತು ಮಿಕ್ಕವರ ಧೃತಿಯ ತರುವ
ತಾವಾಗಿ ಮುಂಬಂದು– ಹಿಂಬಾಲಿಸುವ ಪುಣ್ಯ
ದಯೆ ಬೇಡಿದರು ಕೆಲರು; ಲೋಕ ಹೊರೆವ
ದೈವವೇ ಹರಿಯೆಂದು, ನಂಟನಾ ನರನೆಂದು
ಧರ್ಮಕ್ಕೆ ನೆರವಾಗಿ ನಿಲುವುದೆಂದು
ಸಾರುಹುಣ್ಣೊಡೆದ ತಮ್ಮೆದೆಗಿದುವೆ ಮದ್ದೆಂದು
ಮಾರಿದರು ನಾಡ ಸ್ವಾತಂತ್ರ್ಯ ಹಲರು!

೧೨

'ದೊಡ್ಡವರ ಕಾರ್ಯಕ್ಕೆ ಅಡ್ಡಬರುವುದಕಿಂತ
ಹೆಡ್ಡುತನ ಬೇರಿಲ್ಲ'ವೆಂದು ಹೇಳಿ–
ಹೊದ್ದಿಕೊಂಡರು ಭೀತಿಸನ್ನಿಪಾತ ಜ್ವರಕೆ
ಹೊದ್ದಂತೆ ಹರಿಯ ಕರುಣೆಯ ಕಂಬಳಿ!
ಗಂಡೆದೆಯು ಗಡುಸುತನವಿಂತು ಸದ್ದಡಗಿರಲು
ಮಿಂಡಿಯರ ಒಳಮನೆಯು ಸರಸದಂತೆ,
ಬಂಡೆಯುವ ಬಚ್ಚಿಡುವ ಒರೆಯು ಮಾರ್ದವದಂತೆ
ಹೆಣ್ಮನದ ಪರಿಪಾಕ ಕೆರಳಿತಂತೆ!

೧೩

ಜ್ವಾಲೆಯೊಬ್ಬಳೆ ಸಿಡಿದು ನೆಗೆದು ನಿಂದವಳಲ್ತೆ!
ನೀಲಧ್ವಜನ ರಾಣಿ–ನಾಡರಾಣಿ!
ಮರಳುಗಾಡಿನಲೊಂದೆ ತುಲಸಿ ಚಿಗುರಿರುವಂತೆ
ಬಾಲೆ ಸಾಸದ ಅಮರಗೀತ-ವಾಣಿ!
'ಕೋಶದುಂಬುವ ರಣವು, ಮಾಯಾಗ ಕಾರಣವು'
ಈ 'ರಾಜಕಾರಣ'ವನರಿದರಾರು?
ಮತ್ತಾರು?–ಸೋಗರಿತು ಸೆಟೆದ ಸಿಂಹಿಣಿಯಂತೆ
ಜ್ವಾಲೆಯಲ್ಲವೆ ಕೆರಳಿ ಹಲ್ಮೊರೆದಳು!

೧೪

ಪಾರತಂತ್ರ್ಯದ ಪಾಶವನು ಪುಷ್ಪಸರವೆಂದು
ತೋರಿದರೆ ನಂಬಲ್ಕೆ ಹೂಹಕ್ಕಿಯೆ?
ಕ್ಷತ್ರತೇಜದ ತೆನೆಯು, ಕೆಚ್ಚುಗಡಲಿನ ರಮೆಯು,
ಅದ್ವಿತೀಯಳು–ಆಕೆಗೆಣೆ ಆಕೆಯೆ!
ಪತಿಯು ಮುಳುಗಿದ ಬೆದರುಗುಪ್ಪೆಯನು ಚೆಲ್ಲಾಡಿ
ಧೃತಿಯಧಾಯುಧವವನ ಕೈಗೆ ಕೊಟ್ಟು,
ಚೆಲುನುಡಿಯ ಚಂದನವ ಪೂಸಿದರೆ, ನುಣುಚಿಧನು–
ಭಕ್ತಿಪಂಕಕೆ ಮರಳಿ ಹಾರಿಬಿಟ್ಟು.

೧೫

ಹರಿಭಕ್ತರನು ವಿರೋಧಿಸಲಾರೆನೆಂದೊರೆದು
ಹಲ್ಗಿರಿಯೆ, ತಾಯ್ನಾಡ ಘನತೆಗೆಂದು–
ಹೆತ್ತ ಕರುಳಿನ ತುಂಡುಗಳನು, ಹಾ! ಮಕ್ಕಳನು
ಅಟ್ಟಿದಳು ಕಡಿಕಡಿದು ನುಡಿಯಿರೆಂದು!
ಕಂದರೋ– ಆ ತಾಯ ಪುಣ್ಯಗರ್ಭದ ಶೌರ್ಯ
ಪಿಂಡಗಳು; ಮಿಂಚುಗಳ ಖಂಡದಂತೆ–
ತಂದೆ ಮೆತ್ತಿಸಿಕೊಂಡ ಮೈಯ ಕರ್ದಮವನ್ನು
ತಮ್ಮ ವೀರತೆಯಿಂದ ತೊಳೆದರಂತೆ.

೧೬

"ಮಣಿಯುವುದೆ ಹೇಡಿತನ, ಮುರಿಯುವುದೆ ಸಹಜಗು
ವೆಮ್ಮ ಹುಟ್ಟಿನ ಬೇರುಬಿಟ್ಟ ತಾಣ!"
ಎಂದೊಬ್ಬರೊಬ್ಬರನು ಹುರಿದುಂಬಿ ಹೋರಾಡಿ
ಸಂದರಾ ರಣಯಜ್ಞಕಾಗಿ ಹವನ!
ಕೇಳಿದವಳೀಸುದ್ದಿ ಕಾಳಿಯಾದಳು, ಚಂಡಿ
ಚಾಮುಂಡಿಯೆನೆ ಕನಲುಕೆಂಡ ಕಾರಿ!
ಜ್ವಾಲೆಯೋಡಿದಳೆಲ್ಲಿ?– ನೀಲಕೇತನಸಲ್ಲಿ
ಕಲಿಮಾಡಿ ಹುರಿಗೊಳಿಸಲೆಂದು ಮರಳಿ.

೧೭

ಸತಿಪುತ್ರರುರಿಸಿದ್ದ ಧೃತಿಯ ನಂದಾದೀಪ–
ವನ್ನೆಡವಿ ಬಿದ್ದೆದ್ದು ನೀಲಕೇತು
ಮೊಗಮುಚ್ಚುವಂತೆ–ಮರೆಹೊಕ್ಕು ಬಂಡಿಯ ಕಪ್ಪ
ಕಾಣಿಕೆಯನೊಪ್ಪಿಸುತ–ಕೈಯ ಮುಗಿದು
ನರನ ಹಿಂಬಾಲಿಸಿದನಕಟ ನಿರ್ಲಜ್ಜತನ
ರೂಪೊಡೆದು ನಡೆಯುತಿಹ ಮರುಳಿನಂತೆ.
ಹೊಲಗಾವ ಹುಲ್ಲೊಡಲ ಬೆರ್ಚೆದ್ದು ಬರುವಂತೆ,
ಕುಲದ ಗೌರದ್ಯುತಿಯ ನೆರಳಿನಂತೆ!

೧೮

ನಾಡರಕ್ಷಣೆಗೆ ಮುಡಿಪೆಂದು ತಲೆಯೊಪ್ಪಿಸಿದ
ಮಕ್ಕಳನು ನೆನೆಯುತಸ್ಖಲನವಾಗಿ
ರೋಮ ರೋಮದ ರಂಧ್ರ ರಂಧ್ರದಲಿ ಸೇಡುಕಿಡಿ
ಜ್ವಾಲೆಯಲಿ ಹೊತ್ತಿತುಜ್ವಲನವಾಗಿ!
'ಸ್ವರ್ಗ ಸೇರಿರಿ'– ಎಂದು ಕಣ್ಣೀರನೆರೆದೆರೆದು
ಚಿತೆಗೇರಿಸಿದಳು ಎದೆ ಭಾರವಾಗಿ!
'ಸೇಡು, ಸೇಡೇ ಸೇಡು, ತಣಿಯೆ ನಾಚಿಕೆಗೇಡು'
ಅದಕಾವ ದಾರಿಯಿದೆ ನೇರವಾಗಿ?

೧೯

ಕರುಳಿನುರಿ ಧಗಧಗಿಸೆ, ಮೆಯ್ಗೊಂಡ ಮುಯ್ಯುರಿಸೆ
ಪೂಣ್ದ ಪಣಹೊತ್ತು ಸಾಗಿದಳು ತಾನು.
ರಾಜಧರ್ಮದ ನಂಬಿಕೆಯನು ಬೆಂಬಿಡದವಳು
ವಿಘ್ನಗಳ ಕಂಡು ಎದೆಯೊಡೆವಳೇನು?
ಸಾಧನೆಯ ಸಾಹಸಕೆ ಆದರ್ಶಸತಿಯಾಕೆ!
ಸೋಲಿಂಗೆ ಹೆದರಿ ಕಾಲ್ಗೆಡುವಳೇನು?
ಏಕಾಂಗಸಾಹಸದ ವೈಖರಿಯು ಕಣೆಯಾಗಿ
ಕೊರಳಿರಿಯದೇ ನರನ ಬಿಡುವಳೇನು?

೨೦

ಸರ್ವಾರ್ಪಣಕೆ ಸಿದ್ಧಳಾದ ಚಾಗದ ಮಹಿಮೆ,
ಸಾವನಕ ಸಾಧನೆಯು ಬಿಡದ ಬಲುಮೆ,
ಅಸಹಾಯಳಾಗಿಯೂ ಧೈರ್ಯವಾರದ ಚಿಲುಮೆ,
ಬಿಸಿಗುಂದದಿಹ ಬಿರುಸಿನುಕ್ಕು ಗೈಮೆ–
ಕಾಣಬೇಕೆಲ್ಲಿ?–ಮತ್ತೆಲ್ಲಿ?–ಆ ಜ್ವಾಲೆಯಲಿ.
ನಿಜನಾಮವನ್ವರ್ಥತೆಯ ಕೊಂಡಿತು.
ಅಭಿಮಾನದರ್ಪದಲಿ ಪೊಟ್ಟಳಿಪ ನರನೆದೆಯು
ಘಟವೊಡೆದು ನುಚ್ಚುನೂರಾಗಿ ಹೋಯ್ತು!

೨೧

ವರ್ಷಗಟ್ಟಲೆಯಲ್ಲ, ಮಾಸಗಳು ಬಹಳಲ್ಲ,
ಆರನೆಯ ತಿಂಗಳಲಿ ಪಾರ್ಥನೆದೆಯ
ಹಮ್ಮುಹದ್ದಿನ ಬಿಂಕರೆಕ್ಕೆಯನೆ ಕಡಿದಿಕ್ಕಿ
ಕೆಡವಿದಳು ವೈರಾಗ್ನಿಯಜ್ಞಬಲಿಯ!
'ಜ್ವಾಲೆ ಆಹಾ! ಜ್ವಾಲೆ, ಅರಿ ಭಯಂಕರಿ ಧೀರೆ,
ಸ್ವಾತಂತ್ರ್ಯದೀಪ್ತಿ, ಚೆಲುನಾಡ ರಾಣಿ!'
ಹೇಳಿಸಿದಳಿಂತು ನರ-ನಾರಾಯಣರ, ಮೇಲೆ
ಕೊಂಡಾಡೆ ಶಚಿಯೊಡನೆ ವಜ್ರಪಾಣಿ.

[ನೋಟ ಎರಡು]

೧

ನಿಂದವಳದಾರು ಗಂಗಾನದಿಯ ಕೂಲದಲಿ?
ಜ್ವಾಲೆಯೋ! ಮತ್ತಾರು ಮುಂದಿನಲ್ಲಿ?
ಮಂದಾಕಿನಿಯೆ? ಅಹುದು! ಆ ಪಾಪನಾಶಿನಿಯು
ಹಿಂದೆ ಹೆಣ್ತನವಡೆದ ಕಾಲದಲ್ಲಿ
ಶಂತನು ದೊರೆಯು ವರಿಸಿ ಹಡೆದ ಮುದ್ದಿನ ಕಂದ
ದೇವವ್ರತನು ಸಕಲ ಶ್ರುತಿಕೋವಿದ!
ಭೂಭುಜರ ವೆಗ್ಗಳದ ಶಸ್ತ್ರಾಸ್ತ್ರ ವಿದ್ಯೆಯಲಿ
ಏಕೈಕನಾಚಾರ್ಯ ಪದಕೇರಿದ.

೨

ಭೀಕರದ ಪ್ರತಿಜ್ಞೆಯನು ಪೂಣ್ದ ಕಾರಣದಿಂದ
      ಭೀಷ್ಮ ನಾಮಾನ್ವರ್ಥಗೊಂಡ ಮಹಿಮ!
ಮನದಂತೆಯೇ ಮರಣವಿದ್ದ ‘ಇಚ್ಛಾಮರಣಿ’
      ಯನ್ನು ರಕ್ಕಸರಾಟದಂತೆ– ಅಮಮ!
ಧರ್ಮಯುದ್ಧವ ಮೀರಿ ಯುದ್ಧಧರ್ಮವ ಮಾರಿ
      ಕೊಂದಿಹನು ಆ ಧೂರ್ತ ಪಾರ್ಥನಮ್ಮ,
ಎಂದೊರೆದು ಜಾಹ್ನವಿಯು ಜರಿದು ಹೀನೈಸಿದಳು
      ಜ್ವಾಲೆ, ದಿವ್ಯತೆಯು ಬಗೆಗೆರೆದು ಮೋಹ.

೩

“ಕಣ್ಮುಚ್ಚಿ ನಿಶ್ಶಸ್ತ್ರರಾಗಿ ಜಾನದೊಳಿದ್ದ
      ತನ್ನ ಮುತ್ತಾತರನೆ ಹೊಡೆದು ಹೊಡೆದು,
ಧನ್ಯದೇಹದ ರೋಮರಂಧ್ರಕೊಂದಲಗಂತೆ
      ಅನ್ಯಾಯದಲಿ ಆಹ! ಜಡಿದು ಜಡಿದು,
ಪುಣ್ಯಾರ್ಜನೆಯ ಪೊಟ್ಟಣವ ಬಿಚ್ಚುತೆಸೆವಂತೆ
      ಕೂರ್ಗಣೆಯ ತಲ್ಪದಲಿ ಕೆಡೆದು ಕೆಡೆದು
ಭಾರ್ಗವನ ಶಿಷ್ಯರನು ಗೆಲ್ದನೆಂದುಬ್ಬಿದನು,
      ಹಮ್ಮೆದೆಯ ಭಾಂಡವನು ಬಡಿದು ಬಡಿದು!”

೪

ಅಳಲ ಪಾಕಕೆ ಸೇಡಿನೊಗ್ಗರಣೆಯಿಕ್ಕಿದಳು
      ಜ್ವಾಲೆ– ಗಂಗೆಯು ಕರುಳು ಸೀಳುವಂತೆ!
ದೇವಿಯಾದರು ಪುಣ್ಯಮಾತೆ ಜಾಹ್ನವಿಯಲ್ಲು
      ಮಾಯೆ ಕವಿಯಿತು ಮರ್ತ್ಯರಾಳುವಂತೆ!
ಜ್ವಲಿಸಿತ್ತು ಭುಗಿಲೆಂದು ಹೊತ್ತಿ ರೋಷಾನಲವು
      ಸ್ವೈರಣೆಯ ಶರಧಿಯಲಿ ಕುದಿಹುಟ್ಟಿತು.
ವರದೆಯಾಗಿದ್ದವಳೆ ಶಾಪದೆಯು; ಅವಳೆದೆಯ
      ಕೋವೆಯಲಿ ಕಾಠಿನ್ಯ ಗುಳುಗುಟ್ಟಿತು.

೫

"ಕ್ಷತ್ರದ್ರುಮದ ಕೀಟದಂತೆ, ಧನ್ವಿಯ ಧರ್ಮ-
ಧೇನುವನು ಬಲಿಗೊಂಬ ಗೂಟದಂತೆ,
ಮೆಯ್ಗೊಂಡ ಮನುಜತೆಯನೊತ್ತೆಯಿಟ್ಟವನಂತೆ,
ಪೌರುಷದ ಮಣಿಯ ಹುಡಿಗುಟ್ಟಿದಂತೆ,
ಹಿಂದಣವರುಕ್ಕುವೌದಾರ್ಯಗಳ ಚರಿತೆಯನು
ಕಪ್ಪೆರಚಿ ಕಾಲುಜ್ಜಿ ತೇಪಿದಂತೆ
ಮಡುಹಿದೆಯ ಧೂರ್ತ ಓ, ಪಾರ್ಥ? ಮಾಡಿದ ಕರ್ಮ
ತಪ್ಪುವುದ? ಬೆಂಬಿಡದು ಶಾಪದಂತೆ!

೬

"ತಾಪವೆನ್ನಲು ಗೈದ ಪಾಪವೆನ್ನಲು, ಎನ್ನ
ಶಾಪವೆನ್ನಲು ಇರುವುದೇ ಸಂದೆಯ?
ಇಂದಿನಿಂದಾರನೆಯ ತಿಂಗಳಲಿ ನರ ನಿನ್ನ
ತನುಜನೇ ತರಿದೊಟ್ಟುವನು ಕಂಡೆಯ!
ಎನ್ನೊಡಲ ಬಾಡಬವೆ ಬಾಣವಪ್ಪುದು ಮಗನ
ಬತ್ತಳಿಕೆಗೆ"ಂದು ಶಾಪವನಿತ್ತಳು.
ಅದು ಫಲಿಸುವನಕ ಸಿದ್ಧಾಶ್ರಯವ ತಾನಿತ್ತು
ಜ್ವಾಲೆಯನು ತನ್ನಲ್ಲೆ ಇರಗೊಟ್ಟಳು.

* * * ೭ * * *

ಕಾರ್ಯಕೆ ನಿಮಿತ್ತ ಕಾರಣವಾಗಿ ಕೃತಿಯೊಂದು
ತೋರಲೇಬೇಕೆಂದಿದೆಯೆ ರಹಸ್ಯ?
ಭಾರವಾಯಿತ್ತೆದೆಯ ಭಾಂಡ ತಾಮಸ ತುಂಬಿ
ಮಾಯೆ ವಿಸ್ಮೃತಿಗೆ ನರನಾದ ವಶ್ಯ!
ತನತೆಂಬ ಬಗೆ ಹಳಸಿ ನಂಜಾದ ಗೊಬ್ಬರದಿ
ಕೊನರಿತೇನೆಂಬೆ- ಲಯಬೀಜ- ಬಿಂಕ!
ವೈಷಮ್ಯವಲ್ಲರಿಗೆ ವಕ್ರತೆಯ ತಳಿರೊಡೆದು
ಹಮ್ಮು ಹೂಬಿಟ್ಟು ಹಣ್ಣಿಸಿತು ಕೊಂಕ!

೮

ಅಲ್ಲದಿರೆ– ಪದಕೆ ತಲೆಯಿಟ್ಟು ಕಪ್ಪವ ಕೊಟ್ಟು
ಬಭ್ರುವಾಹನ ತಾನೆ ಕೈಯ ಮುಗಿದು,
'ಒಪ್ಪಿಕೊಳ್ಳಪ್ಪಯ್ಯ'–ಎಂದ ಕಂದನನಂತು
ಧಿಕ್ಕರಿಸಿ ಕೆಡುನುಡಿದನೇಕೆ ಬೈದು?
'ತಂದೆ'– ಎಂದವನನ್ನು 'ಹಂದೆ'– ಎನೆ ಹಳಿಯಲಿಕೆ,
ಹಿಂದೆ ನಡೆದುದನೆಲ್ಲ ಮರೆಯಲಿಕ್ಕೆ,
ಬಂದಿತೇ ಮರುಳಿದ್ದು ಮತಿಗೆ? ಚಿತ್ರಾಂಗದೆಗೆ
ಕುಂದಿಟ್ಟು ಹೀನೈಸಿ ಜರೆಯಲಿಕ್ಕೆ?

೯

ಮಾನವ್ಯಜೀವನದಿ ಪಾರಂಪರೆಯ ಹೊನಲು
ಹರಿಯುವುದು, ಇಡಿಯ ಬದುಕೊಂದೆ ಬಾಳು,
ಎನ್ನುವರು ಕೋವಿದರು– ಶಾಸ್ತ್ರಾದಿಗಳ ಹಿಣಿಲು
ಹೆಣಿಗೆಯನು ಬಿಚ್ಚಿ–ನಾಣ್ಣುಡಿಯ ಸಾಲು!
ಅಂತಾಗೆ ಹೆಚ್ಚಲ್ಲ ಹದಿನೆಂಟೆ ವರುಷಗಳ
ಹಿಂದೆ ನಡೆದಾ ಘಟನೆ ಮರೆಯಲಹುದೆ?
ಒಂದೆ ಬದುಕಿನೊಳಿಂತು ಹಿಂದು ಮುಂದಿನ ನಡುವೆ
ಹೊಂದಿಕೆಯೆ ಇರದಂತೆ ತೋರಬಹುದೆ?

೧೦

ತಸ್ಕರರ ಬಾಧೆಯಲಿ ಹುಯ್ಲಿಡುವ ವಿಪ್ರರನು
ರಕ್ಷಿಸಲು ಪಾರ್ಥ ಬಿಲ್ಬಾಣಗಳನು
ತರಲೆಂದು, ತನ್ನಣ್ಣ ಸತಿವೆರಸಿ ಮಲಗಿದ್ದ
ಸೆಜ್ಜೆಯೋವರಿಯನ್ನು ಹೊಕ್ಕಿದ್ದನು.
ಆ ಮೊದಲೆ ವಿಧಿಸಿದ್ದ ನೇಮಕ್ಕೆ ತಲೆವಾಗಿ
ಒಂದಬುದ ತೊಳಲಿ ಭೂಸಂಚಾರಕೆ
ಪ್ರೇಮಯಾತ್ರೆಯೊ, ತೀರ್ಥಯಾತ್ರೆಯೋ? ಎನುವಂತೆ
ಬಂದಿದ್ದನಾ ಕಾಮಿ– ಮಣಿಪುರಕ್ಕೆ.

೧೧

ಗಾಂಧರ್ವವಿಧಿಯಿಂದ ಚಿತ್ರಾಂಗದೆಯ ವರಿಸಿ
ಅವಳ ಒಡನಾಟದಲಿ ತಿಂಗಳೊಂದ
ಭೋಗ ರಾಗದಿ ಕಳೆದು ಬುವಿಗೆ ನಾಕವನಿಳಿಸಿ
ಬೀಳ್ಕೊಳ್ಳುವಂದು ನರನಳ್ಕರಿಂದ–
ಕಣ್ದುಂಬಿ, ಕೊರಳಪ್ಪಿ, ಗೋಳ್ಗರೆದು, ಕೈಜೋಡಿ
'ಪ್ರಾಣದೇವಾ ಎನ್ನ ಕೈಬಿಡುವೆಯಾ?'
ಎಂದು ಸೆರಗೊಡ್ಡಿ ಬೇಡಿದ ಸತಿಯ ಮೈದಡವಿ
ಸಂತೈಸಲೆಂದು ಕೊಟ್ಟಿದ್ದನಭಯ.

೧೨

"ಓ ಚಿನ್ನ, ಮರೆವೆನೇ ಪ್ರೇಮಪುಂಜವನೆನ್ನ?
ಅರಗಿಳಿಯನುಳಿದು ಹಂಜರವಿದೇಕೆ?
ಬಾಳ ಬಳ್ಳಿಯು ಇಲ್ಲಿ ತಳಿತು ನಳನಳಿಸುತಿರೆ
ಹೂವ ಕಾಣುವ ಮೊದಲೆ ಹೋಪುದಾಯ್ತು!
ಎಂಬೆಣಿಕೆ ಕರುಳ ಕೊರೆಯುತ್ತಿಹುದು; ಮಮಜೀವ
ಮಿಡುಮಿಡುಕುತಿಹುದನೇನೆಂಬೆ ಬಾಲೆ!
ಅಂತಿರಲು, 'ಕೈಬಿಡುವೆಯಾ'– ಎಂದು ಗೋಳ್ಗರೆವ
ಸಾಂತ್ವನವೆ? ನಿನ್ನ ಕೂರ್ನುಡಿಯು ಸಾಲೆ?

೧೩

"ಸಂಗಳಿಸಿದೀ ತೀರ್ಥಯಾತ್ರೆಯೇ ಸ್ವರ್ಗೀಯ
ಸುಮಹಾರವನ್ನೆನ್ನ ಕೊರಳಿಗಿಕ್ಕಿ,
ಸ್ವರ್ಲೋಕಯಾನದಲಿ ಮೇಲೆತ್ತಿ, ಸೌಂದರ್ಯ
ಸುರಭೋಗರಸವ ಕುಡಿಯಿಸಿತು; ಉಕ್ಕಿ
ಮೇಲೆದ್ದು ಬಂದಮೃತಕಲಶವಿದು–ಹೊಂಗಳಸ
ಒಡೆವೆನೇ? ಸೌಭಾಗ್ಯರತ್ನ, ಎನ್ನ
ಶಂಕಿಸದಿರೆನ್ನಾಣೆ ಕಣ್ಣಾಣೆ ಕೊರಳಾಣೆ
ರಾಜಧಾನಿಗೆ ಕರೆಸಿಕೊಂಬೆ ಚಿನ್ನಾ!

೧೪

"ಮುರಿದು ಬದುಕುವುದುಂಟೆ ಹಾಳು ಬೆಂತರದಂತೆ?
ಮರುಭೂಮಿಯ ಭೋರಿಡುವ ಗಾಳಿಯಂತೆ-
ಬೀಸಗೆಯ ಬೋಳು ಅಶ್ವತ್ಥಕುಜ ಸಲುವಂತೆ-
ದೇವರಿಲ್ಲದ ಗುಡಿಯ ಶೂನ್ಯದಂತೆ.
ಇದರ ಮೇಲೆನ್ನ ಮಾತಿಲ್ಲ; ಅಂಜದಿರೆ"ಂದು
ನಂಬಿಸಿದ್ದನು ಕೊರಳ ಕೈಯನಿಟ್ಟು;
ಗದ್ಗದಿತಳಾದವಳ ಕಣ್ಣೊರಸಿ ತಕ್ಕಯಿಸಿ
ಮೊಗವೆತ್ತಿ ಮೇಲೊಂದು ಮುತ್ತನಿಟ್ಟು.

೧೫

ಮುಂಬರಿದು ಶೇಷನ ಕುವರಿ ಉಲೂಪಿಯನಂತೆ
ವರಿಸಿದ್ದನಾಮೇಲೆ ಸಂನ್ಯಾಸಿಯೆ?
ದ್ವಾರಕಿಯ ಸೇರಿ ಕೃಷ್ಣಾನುಜೆ ಸುಭದ್ರೆಯನು
ಹಾರಿಸಿದನೆಂಬಲ್ಲಿ ಮುಚ್ಚುಮರೆಯೆ?
ಮುಂದೇನು? ಹದಿಮೂರು ವರುಷಗಳ ವನವಾಸ
ಅಜ್ಞಾತವಾಸಗಳು ಒದಗಿಬರಲು,
ಇಂದ್ರಕೀಲಾದ್ರಿಯಲಿ ಈಶ್ವರನ ತಪದಿಂದ
ದೊರಕಿತ್ತು ಪಾಶುಪತವೆಂಬ ಸರಳು.

೧೬

ಮತ್ತೆ-ಅಭಿಮನ್ಯುವಿಗು ಉತ್ತರೆಗು ವೈವಾಹ!
ಬಳಿಕ ಭಾರತಯುದ್ಧ ನಡೆದು ಹೋಯ್ತು!
ಎಂದಮಾತ್ರಕೆ ಹಿಂದೆ ನಡೆದುದನ್ನೆಲ್ಲವನು
ಮರೆವಂತೆ ಮುಸುರಿತೀ ಮಾಯೆಯೆಂತು?
ಜೊತೆಯಾಗಿ ಪರಿವಿಡಿಯೊಳಾದ ಮದುವೆಗಳಲ್ಲಿ
ಕೊನೆಯದೊಂದನು ಮಾತ್ರ ಹೊಂದಿಕೊಂಡು
ಮೊದಲಿನೆರಡನು ಮರೆತು, ಆ ಸುಭದ್ರೆಯ-ಹರಿಯ
ತಂಗಿಯನು-ಒಪ್ಪಿದನು ರಾಣಿಯೆಂದು.

೧೭

ಕಾಲಕರ್ದಮದಲ್ಲಿ ಹುದುಗಿ ಮರೆಯಾಗಿದ್ದ
ಹಿನ್ನೆನಹು ರನ್ನವನು ಹೊರಗೆ ತೆಗೆದು
ಚೆನ್ನಾಗಿ ತೊಳೆತೊಳೆದು ತೋರಿದರು, ನರಸಿಂಹ
ಕಣ್ದೆರೆಯನೇಕನ್ನನಂತೆ ಬಗೆದು?
ಜ್ವಾಲಾಪ್ರತಾಪವೇ- ಜಾಹ್ನವಿಯ ಶಾಪವೇ-
ವಿಧಿಯ ಸಂಕೋಪವೇ ಆಗಿ ತಟ್ಟಿ,
ವಿಸ್ಮೃತಿಯ ವಿಹಗನೋ ಎನೆ ಕುಕ್ಕಿ ಟೊಣೆಯುತ್ತು
ತಲೆಯ ತೊತ್ತಳವಾಗಿ ತುಳಿದು ಮೆಟ್ಟಿ!

[ನೋಟ ಮೂರು]

೧

ಬಭ್ರುವಾಹನನೇನು ಮಾಡಾಡಿಯೇ? ಅಮಮ!
ಅಭಿಮನ್ಯುವಿಗು ಮಿಕ್ಕು ಪಾರ್ಥನಿಂದಲು ಉಕ್ಕು;
ತೊದಲಲ್ಲವೀಮಾತು-ಮುಂದೆ ದಿಟವಾಗುವುದು.
ಅದೊ, ಅಲ್ಲಿ ಮಾತೆ ಚಿತ್ರಾಂಗದೆಯ ಮಡಿಲಲ್ಲಿ
ತಲೆಯಿಟ್ಟು ಅಪ್ಪಣೆಯ ಶಿರದೊಳಾನುವನೇನು?
ತಾಯಿ ಹೇಳುವಳೇನು? "ಮರುಳಾಟ ಬಿಡು ಕಂದ
ಆ ವೀರವರ ಪಾರ್ಥ ತವ ತಾತ! ಈ ಮಾತ
ಮರೆಸಿದ್ದೆ ನೀವರಂ ಪ್ರಾಣೇಶರವರೆನಗೆ.

೨

"ಹದಿನೆಂಟು ವರುಷಗಳ ಮೇಲೆ ತಾನಾಗಿಯೇ
ತನ್ನಾಕೆ ತನಯುರನು ತಕ್ಕಯಿಸಬೇಕೆಂದು
ಪುರಕೆ ಬಿಜಗೈದಿರಲು, ಸಂಭ್ರಮೋಲ್ಲಸದಿಂದ
ಸ್ವಾಗತಿಸಿ ಕರೆತಂದು ಸತ್ಕಾರ ಮಾಡುವುದು
ಕರ್ತವ್ಯವಾಗಿಹುದು; ಕೆರಳಿ ಕುದುರೆಯ ಕಟ್ಟಿ
ಕಾದುವುದು ತರವೇನೊ? ಪಾದಕಮಲದ ಭೃಂಗ–
ವಾಗು, ನೀಹೋಗು ಕರೆತಾರ! ಕಾಣಲು ನಿನ್ನ
ಧನ್ಯತೆಯನಾನುವರು"– ಎಂದಳಭಿಮಾನದಲಿ.

೩

ವಿಸ್ಮಯದಿ ಕಣ್ಬೆಗಡುಗೊಂಡ ವೀರ ಕುಮಾರ
"ತಾಯೆ ತಿಳಿದಿರಲಿಲ್ಲ, ತಪ್ಪ ಮನ್ನಿಸಬೇಕು;
ಆದರೂ– ಒಂದೆಡೆಯೊಳೆನಗೆ ಬಲು ಸಂದೇಹ!
ಜನ್ಮದಾತನು ಇಂತು ಜನ್ನಗುದುರೆಯ ಬಿಟ್ಟು
ಅನ್ಯರಾಜರ ಹಾಗೆ ನಮ್ಮನೂ ಸರಿಬಗೆದು
ಬರುವ ಕಾರಣವೇನು? ಹೊರವಳಯದಲಿ ನಿಂದು
ಒಂದು ಒಂದೇ ಮಾತು ಸಂದೇಶ ವಾರ್ತೆಯನು
ಕಳುಹಿಸಿದ್ದರೆ ತಾನೆ ಸಾಕಿರಲು, ಇಂತೇನು?

೪

"ತನ್ನವರು–ಎಂಬ ಆತ್ಮೀಯಭಾವದ ಬಗೆಯು
ಎನಗವರ ಕೃತಿಯಲ್ಲಿ ಕಾಣಲಾರದು ತಾಯಿ!
ಕಣ್ಣ ಬೆರಳಿಂ ಚುಚ್ಚಿ ನೋಟ ನಿರುಕಿಸುವಂತೆ,
ತನ್ನ ತುಟಿಯುನೆ ಕಚ್ಚಿ ಹಲ್ಲ ಪರಿಕಿಸುವಂತೆ,
ಆಯಿತೆಂಬೆನೆ? ಅಲ್ಲ, ತನ್ನ ಮನೆಬಾಗಿಲನು
ಬಿಟ್ಟು ಗೋಡೆಯ ಕೆಡವಿ ನುಗ್ಗಿ ಬರುವವನಂತೆ,
ತನ್ನ ಪೆಟ್ಟಿಗೆಯೊಡೆದು ಹೊನ್ನ ಕೊಳುವವನಂತೆ,
ಆಯಿತೆಂಬೆನೆ?" ಎನಲು ಕೇಳಿ ಕಣ್ದುಂಬಿದಳು.

೫

"ಎನಬೇಡ ಎನಬೇಡ, ಕಂದ ಅಂತೆನಬೇಡ,
ತನ್ನವರ ನಿಜದ ನೆಲೆಯನ್ನು ಪರಿಕಿಪೆನೆಂಬ
ಬಿನ್ನಣವೆ! ಅಲ್ಲದಿರೆ ಅನ್ಯವೇ ಆಗಿರಲಿ;
ಬಂದಿಹರು ಎಮ್ಮವರು, ಅನುಮಾನವೆಂಬುದನು
ಬಗೆಯಲೇತಕೆ ಬಂಧುವಲ್ಲಿ ಮಾನ್ನೊಹೆಯುಳಿ?
ಅಲ್ಲದೆಯು–ಹೆತ್ತವರ ನಡತೆಯನು ತೂಗುವುದು
ಸಲ್ಲದೈ ಕಿರಿಯರಿಗೆ; ಬಳ್ಳಿ ಮರವನು ಹೊದ್ದಿ
ನಿಲ್ಲುವುದು ನಿಜವಲ್ತೆ? ಮುಳ್ಳಿರಲಿ, ಮುಗುಳಿರಲಿ!

೬

"ಹೆಚ್ಚು ಮಾತುಗಳೇಕೆ? ಮುಚ್ಚುಮರೆಯಿನ್ನೇಕೆ?
ತಾತನಾರೆಲ್ಲಿಹರು–ಎಂದು ನೀ ಕಾಡಿದ್ದೆ
ಚಿಕ್ಕಂದಿನಲಿ ನೆನೆಯು! ತಕ್ಕುದಲ್ಲದ ಸಮಯ–
ವಾಗಿತ್ತು ಅಂದದನ್ನೊರೆಯಲ್ಕೆ! ಆದರೂ
ಒಂದೊಮ್ಮೆ ಹರ್ಷ ಮಗಳಿನ್ನೊಮ್ಮೆ ನೈರಾಶ್ಯ–
ವೆಂಬುಭಯ ಸಂಕಟವೆ ಮೂಕ ಸಂಕಟವಾಗಿ
ನಾತ ಬಿಗಿದಿತ್ತೆನ್ನ; ರುದ್ಧಕಂಠದ ಬನ್ನ–
ವಾಗಿ ತೆಗೆದಪ್ಪಿಕೊಳುತಿದ್ದೆ ಮೌನದಿ ಕಾಣ!

೭

"ಕಾರಿರುಳ ಬಾಳುವೆಗೆ ಹಗಲಾಗಿ, ಎನ್ನ ಮನೆ
ತೋರದಿದ್ದೆಡೆ ಬೆಳಕು ಮಿಗಲಾಗಿ, ಬಗೆಯಾಳ
ಬೋಗುಣಿಯು ನೊರೆವಾಲ ನೊಗೆದಂತೆ, ಕಳೆದಿದ್ದ
ಭಾಗ್ಯರತ್ನವೆ ಮರಳಿ ಸಿಗುವಂತೆ ಇಂದಿನೀ
ಯೋಗವೊದಗಿತು; ತಕ್ಕ ಕಾಲದಲಿ ತವತಾತ
ದರ್ಶನವ ಮಾಡಿಸುವ ಅಮೃತಾವಕಾಶವಿದು.
ಉದಯಕ್ಕೆ ಮುನ್ನ ತಿರೆ ಮುಂಬೆಳಗುಗೊಂಬಂತೆ
ಕೇಳಿನ್ನ ಕಂದಯ್ಯ ಹೇಳುವೆನು ಹಿಂಗತೆಯ.

೮

"ತೀರ್ಥಾಟನೆಗೆ ಎಂದು ತಿರೆಯ ಸುತ್ತಾಡುತಿರೆ
ಬಂದಿದ್ದರೀ ಮಣಿಪುರಕ್ಕೆ-ಎಮ್ಮರಮನೆಗೆ;
ಗಾಂಧರ್ವ ವಿಧಿಯಲ್ಲಿ ವರಿಸಿದರು; ಮತ್ತವರ
ಒಂದು ತಿಂಗಳ ಕಾಲ ಉಳಿಸಿಕೊಂಡೀ ನಮ್ಮ
ಅಂತಃಪುರವೆ ಪಾವನವು; ಹಿಂದೆ ಹದಿನೆಂಟು
ಸುಗ್ಗಿಗಳ ಹಿಂದಣಿನ ಸುದ್ದಿಯಿದು; ಮುಂದೆಲ್ಲ
ಬಹು ಕಷ್ಟಕಾಲ ಬಂದೊದಗಿ ಸಹಜಾನುಜರು
ವನವಾಸದಲಿ ನವೆದರಂತೆ ಎನಿತೋ ವರುಷ!

೯

"ಅಂತಾಗಿ ತಡೆದಿರಲುಬಹುದೆಂದು ಬಗೆಯುವೆನು.
ಅಲ್ಲದಿರಲೆಮ್ಮನಲ್ಲಿಗೆ-ಭಾಷೆಯಿತ್ತಂತೆ–
ಕರೆಸಿಕೊಳದುಂಟೆ? ಹಾ! ಪ್ರಾಣೇಶ ವನವಾಸ
ಕಾಲದಲಿ ಕೊರಗಿ ಬಾಡಿಹರೇನೊ! ಕಂಡಿಲ್ಲ!
ಸಾಕಿನ್ನು ನಡೆ, ಅಡಿಗಳಿಂಗೆರಗು; ಕುದುರೆಯನು
ಕಟ್ಟಿದ್ದ ತಪ್ಪ ಮನ್ನಿಸಬೇಡು; ನಾನಿಲ್ಲಿ
ಕಾದಿರುವೆನೆಂದು ಗುಟ್ಟಿನೊಳೊರೆಯು! ಬಿಗಿದಪ್ಪಿ
ಸಂತೈಸಿ ತೆಗೆದು ತಕ್ಕಯಿಸಿಕೊಳ್ಳುವರಣ್ಣ!

೧೦

"ತನ್ನಿಂದೊಗೆದ ಕೇಸರೀಶಾಬವನು ಕಂಡು
ಅಭಿಮಾನ ಅಕ್ಕರೆಗಳಿಂದ ಬೆಂಡಡಹುವರು;
ಕೊಂಡಾಡಿ, ಮುಂಡಾಡಿ, ಎದೆಯೊಳಗೆ ಬರಮಾಡಿ–
ಕೊಳ್ಳುವರು ವಾತ್ಸಲ್ಯಭರದಿಂದ ಬಗೆಯುಬ್ಬಿ.
ನವನೀತದಂಥ ಗುಣ, ಅರಿವು ಅಂತಃಕರಣ!
ತಳುವದಿರು ನಡೆ"– ಎಂದು ಕಳುಹಿದಳು. ಹದಿನೆಂಟು
ವರುಷಕಾಲವ ಮೊದಲ ಹನಿಗೆ ಚಾದಗೆಯಂತೆ
ಕಾದಿದ್ದ ನಲುಮೆಯಲಿ ಕಾದಲನ ಹೊಗಹೊಗಳಿ.

*  *  *  ೧೧  *  *  *

ಪಾರ್ಥಸೆದೆಯೊಳಗಾವ ಪರಿತಾಪ ತುಂಬಿಹುದೊ!
ದಿಙ್ಮೂಢತೆಯ ಶೂನ್ಯವೇಕಿಂದು ಬಂದಿಹುದೊ!
ಶಂಕೆ ಸಂದೇಹಗಳ ಸುಳಿವಿಲ್ಲ; ಮನವೇಕೆ
ಮುಂಕು ಕವಿದಂತಿಹುದೊ-ತಿಳಿದಿಲ್ಲ; ಹಿಂದೆಂದು
ಇಂತಾದುದಿಲ್ಲ; ಬಗೆಯಾಳವನು ರವಿ ಕಾಣ-
ನೆಂದರೂ ಊನನೇ? ಕವಿಯೇನು ಕಾಣನೇ?
'ಕಣ್ಣರಿಯಲಾರದೆಡೆ ಕರುಳು ತಾನರಿಯುವುದು'
ಎಂಬ ನಾಣ್ಣುಡಿಯಿದುವೆ ತಂದೆ-ಮಕ್ಕಳ ನಡುವೆ.

೧೨

ನೀಲಧ್ವಜನ ಕರೆದು ಕೇಳಿದನು ನರನಿಂತು
"ಯಾವ ಪುರವಿದು? ಇಲ್ಲಿಗಾರು ದೊರೆ? ಹೆಸರೇನು?
ವಂಶವಾವುದು? ಬಿರುದು ಬಿರುಸಿನುಕ್ಕುಗಳಿಹವೆ?
ಭಂಡಾರ, ಸೇನೆಸಂವೃದ್ಧಿ, ಸಚಿವರ ಸಿದ್ಧಿ,
ದುರ್ಗ, ಮಂಡಲ, ಮಿತ್ರವರ್ಗ, ಪರಿವೃತಕೀರ್ತಿ-
ಸಪ್ತಾಂಗಗಳ ಸುದ್ದಿಯೇನು? ಕುದುರೆಯ ಕಟ್ಟಿ
ಕಾದಬಲ್ಲರೊ? ಬಿಡುಗಡೋಲೆಯೇಂ ಬಂದಿಲ್ಲ?"
ಎನೆ ಬಣ್ಣಿಸಿದನು ಮಣಿಪುರದ ವೈಭವವೆಲ್ಲ.

೧೩

"ಏನೆಂಬೆ ಪಾರ್ಥ, ಈ ಮಣಿಪುರದ ಮಹಿಮೆಯನು!
ಸೌಭಾಗ್ಯದುನ್ನತಿಯು ಸಗ್ಗವನೆ ಕುಕ್ಕಿಹುದು,
ಸೌಂದರ್ಯದಲ್ಲಿ ಅಳಕಾವತಿಯ ಮಿಕ್ಕಿಹುದು,
ಬಭ್ರುವಾಹನನೆಂಬ ಎಳೆಯರಸು ಇದರ ದೊರೆ,
ಧರ್ಮಜ್ಞ, ಶಾಸ್ತ್ರಕೋವಿದ, ಭೂಭುಜರ ಗಂಡ.
ಕ್ಷಾತ್ರತೇಜದ ಪಿಂಡ, ಸತ್ಪ್ರಜಾರಂಜಕನು,
ಸಾಮಂತರನ್ನು ಔದಾರ್ಯದಲಿ ಮುಸ್ಕಿಸುತ
ಸ್ವಾತಂತ್ರ್ಯವೀವ ಸಾಮೋಪಾಯವಿದೆ ತಂತ್ರ.

೧೪

"ಅಷ್ಟಸಚಿವರ ಸುಬುದಿ ಆಗುಹೋಗುಗಳರಿದು
ಅವಶಿಷ್ಟದಂತೆಸೆವ ಆದರ್ಶದಾಳಿಕೆಯು,
ವರ್ಣವೃತ್ತಿಯ ಪುರಸ್ಕರ್ತ, ನಾಡವರೆಲ್ಲ
ಹುಟ್ಟುವೀರರು, ಧುರಾಪೇಕ್ಷಿಗಳು; ಧರ್ಮಕ್ಕೆ
ಮಣಿವನಲ್ಲದೆ ರಣದಿ ತಣಿವನಲ್ಲವು; ಭುಜಕೆ
ಕೀಟಿಯುಕ್ಕುವ ಹರೆಯ; ಧೃತಿಗಾವರಣ ದಯೆಯು
ಕೃತಿ; ಕೃಪಾನ್ವಿತವಾದ ಮಾತು ಜೇನೇ! ಪ್ರಜೆಯ
ಹಿತಕಾರ್ಯ ಸಂಗ್ರಹಣದುದ್ದೇಶವೇ ಧ್ಯೇಯ.

೧೫

"ಮಾತೆ ಚಿತ್ರಾಂಗದೆಯು ಪತಿಬದೆಯು; ಆದರೂ
ತಾತನಾರೆಂದರಿಯ! ಖಿನ್ನನಿನಿಸಾಗಿಹನು.
ಗೌಪ್ಯವಿರಿಸಿಹಳಂತೆ ಆ ವಿಚಾರವ; ತಾಯ
ನಡೆಯಲ್ಲಿ ಕುಂದಿಲ್ಲ– ತನ್ನರಸ ಹಿಮ್ಮರಳಿ
ಬರುವನಕ ಅರಮನೆಯ ಭೋಗಭಾಗ್ಯಾದಿಗಳ
ತೊರೆದಿರುವಳಂತೆ, ಕಾಷಾಯ ವಸನವನುಟ್ಟು
ಪ್ರೇಮಯೋಗಿನಿಯಂತೆ ನೇಮಗಳ ನೈವೆತ್ತು!
ಈ ರಹಸ್ಯದ ಮೂಲವೇನೊ! ಯಾರಿಗೆ ಗೊತ್ತು?

೧೬

"ಬಭ್ರುವಾಹನಗಿಂದು ಮೀಸೆ ಚಿಗುರುವ ಹರೆಯ,
ಆದರೂ ಶಸ್ತ್ರಾಸ್ತ್ರ ಕೌಶಲದಿ ಎಣೆಯಿಲ್ಲ,
ಶಬ್ದವೇಧ್ಯಾದಿಗಳು ಕರತಲಾಮಲಕವಿವೆ.
ಉಬ್ಬಾಳುವಲ್ಲಿ, ಈತನು ವಿನೀತನು ಎಂದು
ಖ್ಯಾತಿ; ಶಸ್ತ್ರಾದಿಗಳ ಸಾಧನೆಯ ಶೋಧನೆಯ
ಸತ್ಯವೆಸಗುವನಂತೆ; ಮಲ್ಲತನದಲಿ ಸಂದ
ಜಟ್ಟಿಗಳೆ ಜೋಡಲ್ಲ; ಆಗಸದಿ ಜೃಂಭಿಸುವ
ಬಂದುಣಿಯ ಬಂತಿಯನು ಸೀಳ್ದೆಸೆವ ಕಣೆಯಾಟ!

೧೭

“ನರನೆ, ಈ ನುಡಿಯೊಳುತ್ಪ್ರೇಕ್ಷೆ ವರ್ಣನೆಯಿಲ್ಲ!
ಗೆಲ್ಲ ಸುಲಭದಿ ಸಾಧ್ಯವಲ್ಲ; ಚತುರೋಪಾಯ–
ದಲ್ಲಿ ಮೊದಲನೆಯದನು ಬಿತ್ತಿ ಬೆಳೆಯನು ಕೊಂಡು
ಬಿಜಗೈಯುವುದು ಲೇಸು! ದುಡುಕಿದರೆ ಫಲವೀಸು
ದೊರೆವುದೆನೆ ಸಂದೆಯವು; ಯಾಗರಕ್ಷಣೆಗೆಂದು
ನೆರವಾಗಿ ಬಂದು ನಡೆಸೆಂದು ಬಿನ್ನಹವನ್ನು
ಕಳುಹಿದರೆ ಕಾದ ಕಬ್ಬಿಣದಂತೆ ಮೆದುವಾಗಿ
ಬಗೆದುಂಬಿ ಬಕುತಿಯಲಿ ಬಿಲ್ಲಂತೆ ಬಾಗುವನು.

೧೮

“ವರುಷ ವರುಷವು ನಾಡ ಬೊಕ್ಕಸವ ತೆರೆದಿಟ್ಟು
ವಿಬುಧವರ್ಗವನೆಲ್ಲ ಕರೆಕರೆದು ಕೈದಣಿಯೆ
ಕಚ್ಚಳಿಯನಿತ್ತು ಕೋಶವ ತೆರವು ಗೈಯುವನು...”
ನುಂತಾಗಿ ಬಣ್ಣಿಸಲು ನರನ ಕಿವಿದೆರೆಗಳಿಗೆ
ತನ್ನ ಜಸವನೆ ಕೇಳಿದಂತೆ ಸಂತಸವುಕ್ಕಿ
ಒಳಗೊಳಗೆ ತನ್ನೆದೆಯ ಕಿನ್ನರಿಯ ತಂತಿಯೇ
ಮಿಡಿದಿತ್ತು. ಅವ್ಯಕ್ತಭಾವದೊಂದೆಳೆಯನ್ನು
ಕನಿಕರದ ಗಬ್ಬದಿಂದಳೆದಂತೆ ಕಳಲಿತ್ತು.

೧೯

ಅಂತಾದರೂ ಮತ್ತೆ ವಿಪರೀತ ಮರುಚಣಕೆ!
ತಿಳಿಬಾನನಿಟ್ಟಣಿಪ ಕರ್ಮೋಡವಡೆಯಂತೆ
ತಾಮಸದ ಒಡ್ಡೆದ್ದು ಬಗೆಯ ಬಾಂದಳ ಕವಿಯೆ,
ಹಮ್ಮುಗುದುರೆಯ ಹಲ್ಲಣಿಗೆ ಕಳಚಿ ಕೆಲಕೊಗೆದು
ಮೇಯಬಿಟ್ಟಂತಾಯ್ತು! ‘ತನತೆ’ಂಬ ಕಬ್ಬಕ್ಕಿ
‘ಕೊಂಕು’ ತುಂಡವ ತೆರೆದು ‘ಬಿಂಕ’ ಪಕ್ಕವ ಬಡಿದು
ಮದದುಬ್ಬರದ ಮುಗಿಲದೆಸೆಗಾಗಿ ಹಾರಿತ್ತು.
ಬಳೆದ ಮರವೆಯ ನೆಗಳೆ ತಿಳಿವ ಕಬಳಿಸುತಿತ್ತು.

೨೦

"ಬಿಡು ನೀಲಕೇತು, ನೀ ಜಗದಲ್ಲಣನ ಮುಂದೆ
ನುಡಿ ವಿಕ್ಕವರ ಶೌರ್ಯ ಕಥೆಯನ್ನು! ತ್ರೈಲೋಕ್ಯ
ಗಂಡನಾರೆಂದರಿದುಕೊಂಡೆಯಾ? ಭುವನಪ್ರ-
ಚಂಡನಾರೆಂದರಿದು ಹೇಳಿಲಾ! ಬ್ರಹ್ಮಾಂಡ
ಭಾಂಡ ಥಣಥಣಿಸಿ ಬಿರುಕೊಡೆಯುವುದು ಮತ್ತಾರ
ಗಂಡುತನದಾಘೋಷದೊಂದು ಗುಡುಗಿನ ರವಕೆ?
ಗಾಂಡಿವದ ಒಂದು ಜಡಿತಕ್ಕೆ ನಿಲ್ವನೆ ಈತ?
ಭಂಡಾಟ ಸಿಂಹಗರ್ಜನೆಗೆದುರೆ ಹುಲುಹೋತ?

೨೧

"ಸಂಶಪ್ತಕರು ಮೇಣ್ ನಿವಾತಕವಚರು, ಭೀಷ್ಮ
ದ್ರೋಣ ಮೊದಲಾದವರು ಬಡವುಗಳೆ? ಪೋರನಿವ
ಮುಕ್ಕಣ್ಣನೊಂದು ಘನಮುಷ್ಟಿಘಾತಕೆ ಬಹನೆ?
ಬಿಲ್ಲೋಜನೊಂದು ಬೆರಳಿಂಗೆಣೆಯೆ? ಸೂತಜನ
ಕೈಯೊಂದಕೆಣೆಯೆ? ಕೀರ್ತಿಸುವುದೇತಕೆ? ಎನ್ನ
ತನಯನಭಿಮನ್ಯುವಿನ ಒರ್ಚಣದ ಸಾಹಸದ
ಬಲುಮೆಯಲಿ ಇವನೊಂದು ಶತಸಹಸ್ರದ ಕಣವೆ?
ಬೆಟ್ಟವೆಂದೊರೆಯದಿರು ಬರುತಿಹುದು ಬರಿತೃಣವೆ.

೨೨

"ಸರಳ ಹಿಳುಕಿನ ಕೊನೆಗೆ ಕರುಳ ಬಾಯಲಿ ತೆಗೆವೆ,
ತರಳನಿವನುಬ್ಬು ವೆಗ್ಗಳತೆಗಾನಂಜುವೆನೆ?
ಸುರಪನೈರಾವತವ ಧರೆಗಿಳಿಸಿಹೆನು; ಅಗ್ನಿ
ಶರಣೆನಲು ಖಾಂಡವವ ಸುಡಲಿತ್ತಿಹೆನು; ಗಯನ
ಹರಣಕಾಯಲು ಹರಿಯ ಧುರಕಿದಿರು ನಿಂತಿಹೆನು."
ನಿಜ ನೆಗಳ್ತೆಯ ನೇಗಿಲಿಂದಿಂತು ತನ್ನೆದೆಯೆ
ಬಗಿದುತ್ತು ಕೊಳೆಯ ಚೆಲ್ಲಾಡಿ, ಬಿತ್ತಿದ ಕಳೆಯ
ನೆಗೆದು ತಲೆಕೆಳಗಾಗಿ ಕಾದುನಿಂತನು ಬೆಳೆಯ!

## [ನೋಟ ನಾಲ್ಕು]

೧

ಪಟ್ಟದಾನೆಗಳ ನಿಲಿಸಿಹರು ಅಂಬಾರಿಗಳ
ಕಟ್ಟಿ; ಸಿಂಗರಿಸಿರ್ದ ವಾರುಹಂಗಳ ಸಾಲ-
ನೊಟ್ಟಯಿಸಿಹರು; ಮಂಗಳಾಂಗಿಯರು ಕಾದಿಹರು
ಕಳಸಗನ್ನಡಿ ಕೂಡಿ ತಳಿಗೆ ಬಟ್ಟಲ ಪಿಡಿದು;
ಭೇರಿ ಡಂಕ ನಗಾರಿ- ತೂರ್ಯರವ ಮುಂಬರುವ
ಕಾರ್ಯಕಾರಣಗಳನು ಸಾರುತಿಹವೆನೆ ಶುಭಾ-
ಶುಭಗರೆಯುತಿಹವು; ಸುಳಿ ಸುಟ್ಟುರಿಗೆ ತತ್ತರಿಪ
ತರಗಿನೋಲ್ ಗುಡಿಯೆಸೆದವು.

೨

ಮುತ್ತು ರತುನಾದಿ ನವರತ್ನಗಳ ಹೊರೆಗಟ್ಟಿ
ಹೇರಿ ಮುನ್ನಡೆಸಿ ಬಹ ತೇರಿನೋಳಿಯ ಮುಂದೆ,
ಹೊತ್ತ ಮುಕುಟವನು ತಲೆಗಳಚಿ ಕೈಯಲಿ ಪಿಡಿದು
ಬಭ್ರುವಾಹನ ವೀರ ಸುಕುಮಾರನಾ ತೇರ-
ನಿಳಿದು ನಿರ್ಭರಗೌರವದ ಬಗೆಯ ಮಾತೃಕೆಯು
ಸಾಲಭಂಜಿಕೆಯ ಚೆಲುವಿಕೆಯ ಸರಿಹೋಲಿಕೆಯು
ತಾಳಿ, ತನ್ನಷ್ಟಮಂತ್ರಿಗಳ ನೆರವಿಯ ನಡುವೆ
ಕಾಲ್ನಡೆಯೊಳೈತಂದನು.

೭

ಅಂಬರದ ಸಾಣೆಗಲ್ಲಿನ ಮೇಲೆ ಮಸೆದೊಂದು
ಮಿಂಚು ಜಿಗ್ಗನೆ ಬೆಳಗಿ ತನ್ನೊಂದು ತುಣುಕನ್ನು
ಚುಂಬಿಸೋಲ್ ಕಳುಹಿತೋ ಎನಲು ಕಿಡಿಯುರ್ಚುತಿರೆ,
ಸಂಭ್ರಮಿತರಾಗಿ ಸಂದಣಿಯು ಜನ ಬೆಚ್ಚುತಿರೆ,
ಬಾದಬದ ಕೆಂಡವೋ ಮಾರ್ತಾಂಡ ಖಂಡವೋ!
ಎನಲೊಂದು ದಿವ್ಯಾಸ್ತ್ರ ತೊಳತೊಳಗಿ ರಂಯ್ಯೆಂದು
ಸುಸುಳಿತ್ತು ಬಭ್ರುವಾಹನನ ಬತ್ತಳಿಕೆಯಿಂ
ಸ್ವರ್ಣೋರಗನ ಸಾಮ್ಯದಿ!

೮

ಆರು ಸುತ್ತಿನ ಉಕ್ಕಡಗಳ ಕಳೆದೇಳನೆಯ-
ಪಾರ ಜಲದುರ್ಗವನ್ನುತ್ತರಿಸಿ, ಹೊರಬಯಲ
ಡೇರೆಗಳ ಕಂಡೊಮ್ಮೆ ನಸುನಕ್ಕು, ಸೇನೆಗಳ
ತಾರಗೆಯು ತಳಿಯು ತಂಗದಿರನಿವನೆನುವಂತೆ
ತರಳ ಮುಂಬಂದು ತನ್ನಯ ತಾತನಡಿಯಲ್ಲಿ
ತಗ್ಗಿ ತಲೆಯಿಟ್ಟು ಕೈಜೋಡಿದನು; ತನ್ನೆದೆಯ
ಕ್ಷತ್ರತೆಯ ಬಿರುಸಿಂಗೆ ತತ್ತರಿಸುತಿರ್ಪನೆನೆ
ನಾತು ತಡೆತಡೆದೆಂದನು.

೯

"ಅಪ್ಪಯ್ಯ ನೀನೆನ್ನ ತಪ್ಪ ಮನ್ನಿಸಬೇಕು!
ಅರಿಯದಿದ್ದೆನು; ತಾಯಿ ತಿಳಿಸಿ ಹೇಳುವ ಮೊದಲೆ
ಕಟ್ಟಿರ್ದೆ ಕುದುರೆಯನು. ಜನ್ಮದಾತರು ಎಂದು
ತಿಳಿದೆನಾಮೇಲೆ. ತಕ್ಕಯಿಸಿ ಹೊರೆಯುವ ಪುಣ್ಯ
ಪಾದಕ್ಕೆ ಸಂದಿಹುದು. ತಾಯಿ ಚಿತ್ರಾಂಗದೆಯು
ಬರವ ಹಾರೈಸಿಹಳು, ನೊಂದು ಬಡವಾಗಿಹಳು."
ಎಂದು ಬಿನ್ನಯಿಸುತಿರೆ ಪಾರ್ಥ ವಿಸ್ಮಯದಿಂದ
ಕಣ್ಬೆಗಡುಗೊಳುತಿರ್ದನು.

೬

ಮನವು ಮರವೆಯ ಮಡುವಿನಲ್ಲಿ ಮುಳುಗಿರೆ, ಅದಱ
ತಳದಿಂದ ಗುಳುಗುಳಿಸುತೆದ್ದ ಬೊಬ್ಬುಳಿ ಸೊರೆಯೆ,
ತಳಕಿತ್ತು ಮೇಲ್ವರಿಯೆ ಸರುವ ಬಗ್ಗಡವಾಯ್ತು!
ಹಿಗ್ಗು ಬಲಿಯಿತು, ಬಲಿದು ಹಿರಿ ಹಿಗ್ಗು ಹೆಮ್ಮೆಯೆನಿಸೆ
ಬೀಗಿ ನಲಿಯಿತು, ನಲಿದು ಪೈಶಾಚ್ಯಲೀಲೆಯಲಿ
ತಾಮಸನ ಕೈವಿಡಿದು ಕುಣಿಕುಣಿದು 'ಹುಂಕಾಱ'
ಮೇಳದಲಿ, 'ತನತೆಂ'ಬ ತಾಳದಲಿ! ತನಯನನು
ಕಡೆಗಣಿಸಿ ನುಡಿದನಿಂತು.

೭

"ನೀಲಧ್ವಜನೆ ನಿನ್ನ ಬಣ್ಣನೆಗೆ ಮೆಚ್ಚಿದೆನು!
ನೀನೆಂದುದೇನಾ ಮಹಾವೀರನೇ ಈತ?
ದಾರಿ ಹೋಕರ ತನ್ನ ತಂದೆಯೆನ್ನುವ, ಮತ್ತೆ
ಕರಿಡೊಯ್ಯೆ ತಾಯೊಡನೆ ಸಂಬಂಧ ಹೊಂದಿಸುವ
ಈ ತೆರನ ಹಿಂದೆಂದು ಕಂಡಿಲ್ಲ; ಮುಂದಕೂ
ಕಾಣೆನಾಹಾ! ನಾಚುವೆನು ಹೂಹೆತನದಿಂಥ
ತಂತ್ರಕ್ಕೆ– ಈ ನೋಡಿ ಮಂತ್ರಕ್ಕೆ!" ಎಂದೊರೆದು
ಮೊಗದಿರುಹಿ ಕುಳ್ಳಿರ್ದನು.

೮

ಅಣಕ ನಗುವಿನ ಅಂಟುದಾರದಲಿ ತೊನೆದಾಡಿ
ಮೂದಲಿಕೆಯಾ ಜೇಡ ಜೋಲುತಿರೆ ನಾಲಗೆಯ
ನೊಣವು ಬಾಯುಂಗಳವ ಬಿಟ್ಟೆದ್ದು ಹಾರಿತ್ತು.
ಮದದುಬ್ಬರದ ಸುಳಿಯ ಗುಂಡಿಯಲಿ ಬಾಯ್ದೆರೆದ
ನೆಗಳೆಯೆನೆ ತನ್ನತನ ಕಾಡಿರಲು ಕೊಂಕುನುಡಿ
ಬೆಳ್ಳೆರಲೆಯಾಗಿ ಆಸರಿಗಾಗಿ ಬಂದಿತ್ತು!
ಲಯದ ಬಾಗಿಲಿಗಿಂತು ಬದುಕು ಧಾವಿಸಬಹುದೆ
ಮಾಯಾಮಹಿಮೆಯಲ್ಲದೆ?

೯

ಬಭ್ರುವಾಹನನೆದೆಯ ಸೀಳಿ ನುಡಿಯಂಬಿನಲಿ
ಅಭಿಮಾನವೆದೆಗುಂಡಿಗೆಯು ಕಿತ್ತರೋ ಎನಲು
ಬಿಳಿಚಿತಾ ನುಣ್ಮೊಗವು ರೋಸಿ ಅವಮಾನದಲಿ.
ಸಂಕೋಚವೇ ಕರಗಿ ಹರಿದಂತೆ ಸರ್ವಾಂಗ
ಬೆವರಿತ್ತು. ಹರಣ ಹೇಸುತ ಒಡಲ ಗವುಸನ್ನು
ಹೊದ್ದು ಮರೆಯಾದಂತೆ ಉಸಿರು ಕಟ್ಟಿತು. ಬಗೆಯ
ತಲ್ಲಣದ ಮಿಡುಕು ತುಟಿಯಲ್ಲಿ ಮೂಡಿತು. ತಡೆದ
ನುಡಿಯನೆಳೆದಿಂತೆಂದನು.

೧೦

"ತಾತ! ಈ ಹೊಲ್ಲನುಡಿ ಸಲ್ಲ; ಮರೆತಿಹಿರೇನೊ!
ಮನ್ನಿಸುವುದೆನ್ನ ಧಾರ್ಷ್ಟ್ಯವನು; ಇನ್ನೇನೆನಲಿ?
ನೆನೆಯಿರಾ ಹದಿನೆಂಟು ವರುಷ ಹಿಂದಣ ನಿಮ್ಮ
ತೀರ್ಥಾಟನೆಯ, ತಾಯಿ ಚಿತ್ರಾಂಗದೆಯ; ಒಂದು
ತಿಂಗಳಲಿ ನಮ್ಮಾಲಯದಿ ತಳುವಿದಿರಿ; ಬಳಿಕ
ಜನಿಸಿದವ ನಾನಿಮ್ಮ ಕಂಡರಿಯೆ; ಇಂದೆನ್ನ
ಜನುಮ ಸಾರ್ಥಕ"ವೆಂದು ಕೈಮುಗಿಯೆ, ಕೊರಳುಬ್ಬಿ
ಕಣ್ದುಂಬಿ ಹರಿದುಹೋಯ್ತು!

೧೧

ಅಸುವಿದಾರಣವಾದ ವಿಷದ ನೊರೆಯೆನೆ ನಕ್ಕು
ಗಹಗಹಿಸುತೆಂದನಾ ನರನು. "ನೀಲಧ್ವಜನೆ,
ವೃಷಕೇತನನೆ ಕಂಡಿರೇ ಕೇಳಿದಿರೆ ಚೋದ್ಯ!
ಎನಗೆನೇ ಅರಿವಿಲ್ಲದೆನ್ನ ಚರಿತೆಯನಿವನು
ಕಟ್ಟಿ ಹೇಳಿದ ಕತೆಯ? ತಾನೆ ಹುಟ್ಟುವ ಮೊದಲು
ನಡೆದಿತೇನೆಂದು ತನ್ನಲ್ಲೆ ಕಲ್ಪಿಸಿಕೊಂಡು
ಒಡನುಡಿದ ನಿರ್ಲಜ್ಜತನವಿದನು? ಭೂರುಹಕೆ
ಬೋಧಿಸುತ್ತಿದೆ ಕಳಿಕೆಯು!

೧೨

“ತೀರ್ಥಾಟನೆಗೆ ಎಂದು ತಿರಿದಿರುವೆನಂತೆ! ಮೋಸ
ಚಿತ್ರಾಂಗದೆಯು ಇವನ ತಾಯಂತೆ! ಯಾರೀಕೆ?
ಎಂಥ ಮೋಡಿಯ ಹೆಣ್ಣೊ! ಬಳೆವ ಮಗನಿಗೆ ತನ್ನ
ನಡತೆಯಲಿ ಸಂದೇಹಗೊಳದಂತೆ ಮರೆಯಿಸಲೊ,
ಮತ್ತೇಕೊ!–ಲೋಕದಲಿ ಕೀರ್ತಿಭಾಜನನಾಗಿ
ಮೆರೆವೆನ್ನ ತಾತನೆಂದೊರೆಯಲ್ಕೆ ಕಲಿಸಿಹಳು.
ಮನೆಯ ಮೂಲೆಯಲೆಲ್ಲೊ ನಾರುತಿದ್ದರೆ ಧೂಪ
ಉರಿಸುವುದು ಸಾಜ ಮಂದಿ!

೧೩

“ವಿಟವೃತ್ತಿಯಲಿ ತಾನು ಹಡೆದ ಕಂದನ ಕಿವಿಗೆ
ತಟುಕು ಜೇಂಬನಿಯ ಸುರಿಸುತ್ತ ವಂಚಿಸಿದಾಕೆ
ದಿಟವಾದ ಹೆಣ್ಣೇ! ಪ್ರವೀಣೆ, ಪಳಗಿದ ಜಾಣೆ!”
ಎಂದೆನುತ ತನ್ನ ಬಗೆಯಾಳವೇ ನೆಲೆಗೆಟ್ಟು
ನಂಜಾದ ಹೃದಯದುರ್ಗಂಧವನು ಕಾರಿದನು.
ಮಂಗಳಕೆ ಸಂಕೇತವೇ ಘೂಕ ಘೂಂಕಾರ?
ಕ್ರಮಗೆಟ್ಟ ಭಾಗಗಳೆ ಕಿರಿಚುವವು ಯಂತ್ರದಲಿ
ಸಂಚಾಲನದ ಕಾಲದಿ!

೧೪

“ಆಹುದಯ್ಯ! ಜೀವಿಸಿದ್ದರೆ ಈಗ ನಿನ್ನಷ್ಟೆ
ಹರೆಯದವನಾಗುತಿದ್ದನು ಎನ್ನ ಸುಕುಮಾರ.
ಅಭಿಮನ್ಯು, ಧೃತಿಪಿಂಡ, ಸತಿ ಸುಭದ್ರೆಯ ಕಂದ!
ಚಕ್ರವ್ಯೂಹವ ಮೆಟ್ಟಿ ಹೆಣದ ಬಣಬೆಯನೊಟ್ಟಿ
ಕಡಿಕಡಿದು ಪಾರ್ಥಿವರ ತೇಜಹವ್ಯೋರ್ನ್ನತಿಯ
ತುತ್ತತುದಿಯಲಿ ತನ್ನ ಕತ್ತಿಯಾಟದ ಹೊನ್ನ
ಕಲಶವಿಟ್ಟನು. ಕುರುಕ್ಷೇತ್ರ ಕಲಿಗಳ ಹರಣ
ಗಂಟಲೊಳೆ ತುಟಿಯುವಂತೆ!

೧೫

“ನೀನೊರೆದ ಕತೆ ಕೇಳುವುದಕೆ ಚೆನ್ನಾಗಿಹುದು,
ಆದರೂ ಅನ್ನಿಗರ ರೀತವನು ತನತೆಂದು
ಎನ್ನಲ್ಕೆ ನಾನೇನು ಷಂಡನಲ್ಲೈ! ನಿನ್ನ
ತಾಯಿಯನೆ ಗುಟ್ಟಾಗಿ ಕೇಳಿ ತಿಳಿದುಕೊ ಕಾಣ!
ನಿನ್ನಂತಹನು ಎನ್ನ ಮಗನೆಂದು ಹೇಳಿದರೆ
ಕೇಳಲಿಕ್ಕೂ ಮನವು ಹೇಸುವುದು–ಇರಲಿ; ನೀ
ನಾಚದಿರು; ತಿಪ್ಪೆಯಲಿ ಮಾನಾಗ ಜನಿಸುವುದೆ
ಭೂನಾಗವೇ ಅಲ್ಲದೆ?

೧೬

“ಕಪ್ಪಕಾಣಿಕೆಯೊಪ್ಪಿಸಿರುವೆ, ಕೈಮುಗಿದಿರುವೆ,
ತಪ್ಪಾಯಿತೆಂದು ಕೈಂಕರ್ಯವನ್ನಾಶಿಸುವೆ,
ಒಪ್ಪಿಕೊಳುವೆವು; ಕಿರಿಯನೈಸೆ! ಮನ್ನಿಸಿದರೂ
ಅಪ್ಪನೆನಿಸಲು ನಿಮ್ಮ ಅರಮನೆಗೆ ಬರಲಾರೆ!
ಖಗರಾಜ ಬೇಟಕ್ಕೆ ಕಾಗೆಯನ್ನೊಲಿಯುವುದೆ?
ಸಿಂಗ ಹಸಿದಿದ್ದರೂ ಸೀರುಡುವ ಸೀಳುವುದೆ?
ಕೊಕ್ಕರೆಯ ಇರ್ಕೆಯೆಡೆ ನವಿಲೊಲಿದು ನಡೆಯುವುದೆ?
ಕುಪ್ಪೆಯಲಿ ಪಿಕದ ಕುಕಿಲೆ?

೧೭

“ಕುಂಭಿ ಮೈಕುಂದಿದರು ಕುರಿಹಟ್ಟಿ ಹೊಕ್ಕುವುದೆ?
ಬಗ್ಗ ಬಡವಾದರೂ ಸೊಣಗಂಗೆ ದಕ್ಕುವುದೆ?
ಕೆಚ್ಚಲುಣ್ಣಿಯು ಹೀರೆ ನೊರೆವಾಲು ಸಿಕ್ಕುವುದೆ?
ಪಾರ್ಥಿವಾಗ್ರಣಿಯೆನ್ನ ಪದರಜವು ಸೋಕುವುದೆ?
ಮಂಗನಿಗೆ ಮಾಣಿಕವೆ? ಕಿಟಿಗೆ ಚಂದನದಪ್ಪೆ?
ಕಜ್ಜಾಯವೇ ಬಿಡಾಲಕೆ? ಹವಿಯೆ ರಾಸಭಕೆ?
ಮಹಿಷನಿಗೆ ಕಿನ್ನರಿಯೆ? ಬಸವಗಂಬಾರಿಯೇ?.
ಸಂಪಗೆಯೆ ಸೆಣ್ಣುಂಬಿಗೆ?

೧೮

“ಬಾಯಾರಿ ಬಂದವಗೆ ದೊರೆಯೆ ಪಾನಕ ಲೇಸು,
ದೊರೆಯದಿರೆ ತಿಳಿನೀರ ನೀರಿದರು ತಪ್ಪಲ್ಲ;
ಆದರೂ ಬಚ್ಚಲುದಕವ ಕುಡಿಯುವುದೆ? ಹಸಿಯೆ–
ಮೃಷ್ಟಾನ್ನ ಬೇಡ– ಬರೆ ಅಂಬಲಿಯೆ ಸಾಕಹುದು;
ಹಳಸಿ ಹೊಲಸಾದುದನು ಉಂಬುದೇ? ಕೇಳಯ್ಯ
ತರಳನಾದರು ತಿಳಿಯಬಲ್ಲೆ ನೀ; ಅಲ್ಲದೆಯು
ಗರಿಕೆಯರಸುವ ಚಿಗರೆಗಣ್ಣಂತೆ ಹರೆಯದಲಿ
ತಾನಾಗಿ ತಿಳಿವುದೈಸೆ!

೧೯

“ಅರಮನೆಯನಗಲಿ ಬಹುದಿನಗಳಾದವು ಸಹಜ;
ಆದರೂ ನೀರಡಸಿಕೊಂಡಿಲ್ಲ, ಹಸಿದಿಲ್ಲ;
ಆ ಕಾರಣದಿ ಎನಗೆ ಭೋಜನವೆ ಬೇಕಿಲ್ಲ;
ಕರೆದೂಟವಿಕ್ಕಿದರು ಬರದುದಕೆ ನೋಯದಿರು.
ನೀನಿತ್ತ ವಸ್ತು-ವಿತ್ತಗಳ ಹಸ್ತಿನಪುರಕೆ
ಸಾಗಿಪುದು; ಗೆದ್ದ ಗೌರವಕೆ ಬೆಂಗಾವಲಿಗೆ
ನಿನ್ನ ಕರೆದೊಯ್ವುದೇ ಕ್ರಮವಾದರೂ, ನೀನು
ಬಾರದಿರು ಮನ್ನಿಸುವೆವು.”

೨೦

ನರನ ಈ ವ್ಯಂಜಕದ ನುಡಿಯೊ? ಕೊಂತದ ಜಡಿಯೊ?
ಬಗೆಯಣಕದಿಂದೆದ್ದ ನಗೆಯೊ? ನಂಜಿನ ಹೊಗೆಯೊ?
ಕನಿಕರದ ಸೋಗೊ? ಕರಿಚೇಳ ಬಾಲದ ಬಾಗೊ?
ಮಾತು ಕರುಣಾಮಯವೊ? ಕಾಳೋರಗನ ನಯವೊ?
ಔದಾರ್ಯದೆದೆಯೊ? ನಾಗನ ಹೆಡೆಯೊ? ಮನ್ನಿಸಿದ
ಹಿರಿಮುಡಿಲೊ? ಮೂರ್ಧ್ನಕೆರಗಿದ ಸಿಡಿಲೊ? ಬೈತಿಟ್ಟ
ಕಾಲಕೂಟದ ಕುಂಭವೊಡೆದು ಹರಿಯಿತು ಬುರುಗು
ಬೆಳ್ನೊರೆಯ ತೋರಿ ಬೀರಿ!

೨೧

ಬಭ್ರುವಾಹನನು ಈ ಹೊಲೆಮಾತ ಕೇಳುತಿರೆ
ರೋಮ ರೋಮದ ಬುಡದಿ ಸಿಡಿಮದ್ದಿನುಂಡೆಯನು
ಹುಗಿದಿಟ್ಟು, ತುದಿಗೆ ಬೆಂಕಿಯ ಕೊಟ್ಟು, ನೆಗೆದೋಡಿ
ಸ್ಫೋಟನವ ಕಾದು ಕುಳಿತಂತಾಯ್ತು! ರೋಷಾಗ್ನಿ
ಜ್ವಾಲೆಯನ್ನೆರಚಿ ಆಪಾದಮಸ್ತಕ ಹರಡಿ
ಅದರ ಕಬ್ಬೊಗೆಯಿಂದ ಕಾಣದಾಯಿತು ಲೋಕ!
ಉಸಿರು ಕಟ್ಟಿತು; ಮೂಕನಂತೆ ನಾಲಗೆಯೊತ್ತಿ
ಮಾತ ಮರೆಯಲ್ಲಿಟ್ಟಿತು.

೨೨

ಕಟಕಟನೆ ಹಲ್ಗಡಿದು, ಸಿಡಿಲಪೊಟ್ಟಣದಂತೆ
ಸೆಟೆದು ಸಿಡಿದೆದ್ದೆಡದ ಕಾಲಿಂದ ಕಾಣಿಕೆಯ
ಪೆಟ್ಟಿಗೆಯನೊದ್ದು ದೂರಕ್ಕೆ ಸರಿಸುತ, ಮತ್ತೆ
ತಡೆಯಲಾರದೆ ತನ್ನ ಕೈಕೈಯ ಹೊಸೆಹೊಸೆದು
ಎಡಗೈಯ ಮೋಗ್ಗೆಯನಮುಕಿ ಕಳ್ಕನೆ ಕಚ್ಚಿ
ನೆತ್ತರನ್ನುಗುಳಿದನು. ಸಹನಾಕ್ಷಮಾಗರ್ಭ
ದಿಂದೊಡೆದ ರೋಷಲಾವಾರಸದ ಭರದಿಂದ
ದೇಹ ಭೂಕಂಪವಾಯ್ತು!

೨೩

ಹೊತ್ತುವರಣಿಯ ಕೊಳ್ಳಿಯಿಂದೊಡೆವ ಕೆಂಗಿಡಿಯು
ಕಟ್ಟೆರಚಿದಂತಾಯ್ತು ಕಣ್ಣು! ಕುದುರಿತು ಭುಜವು;
ಭುಜದ ಸಮುಕುಬ್ಬಿದ್ದ ಪುಷ್ಟಕಂಠವನೆತ್ತಿ
ಕೇಕರಿಸಿ, ಮದದಂತಿ ಘೀಳಂತೆ, ನಿಂದ ನೆಲ
ಬಿರಿಯಿತೋ ಎನುವಂತೆ, ದಿಗ್ಭಿತ್ತಿಗಳ ಸಾಲು
ಸರಿಯಿತೋ ಎನುವಂತೆ, ಕವರಿದಾಗಸ ಬಟ್ಟೆ
ಹರಿಯಿತೋ ಎನುವಂತೆ ನರನ ಕರೆದಾರ್ಭಟಿಸಿ
ಉಚ್ಚಕಂಠದೊಳೆಂದನು.

೨೪

"ಅರ್ಜುನಾ, ಮುಚ್ಚು ಬಾಯೊದರದಿರು ಗಳಹದಿರು!
ನೆತ್ತಿಗೇರಿದ ಹಮ್ಮು ಪಿತ್ತವನ್ನಿಳಿಸದಿರೆ
ಕುತ್ತಿಕೊಳ್ಳುವೆನೆನ್ನ ತಲೆಯನ್ನೆ! ತಾಯಿಯನು
ತೊಂಡುವೆಣ್ಣೆಂದೆಯಲ! ನಿನ್ನ ಕಟವಾಯಿಯನು
ಕೊಯ್ಯದಿರಲೆನ್ನ ಈ ಕೈಯನ್ನೆ ಕಡಿಯುವೆನು;
ನಾಳೆ ಮೂಡಿದ ಹೊತ್ತು ಮುಳುಗುವನಿತರ ಮುನ್ನ
ಕಡಿದೊಡ್ಡು ಕೆಡೆಯದಿರೆ ಬಭ್ರುವಾಹನನಲ್ಲ-
ಜಾರ ಜೀವನದ ಬೀಜ!

೨೫

"ಕೊಳೆಯ ಗೊಬ್ಬರ ಗುಂಡಿಯಿಂದೆದ್ದು ಆವರಿಸಿ
ಬಿಳಿಯ ಅಣಬೆಗಳೋಳಿ ಅರಳಿ ಕಂಗೊಳುವಂತೆ
ಥಳಕಿನುಡುಗೆಯು ನಿನ್ನ ಸಭ್ಯತೆಯ ತೋರಿದರು
ಒಳಗೆ ಹೊಲೆ-ಹೊಲ್ಲಹದ ಬಗೆಯಾಳ ನಾರುತಿದೆ!
ಕುಜನ ಮೌಳಿಗಳ ಕೃತಿ ಕುತ್ಸಿತ ಮನೋವೃತ್ತಿ
ಎಂಬ ನಾಣ್ಣುಡಿಯ ಕೇಳಿದ್ದೆ;- ಕಂಡೆನು ಇಂದು!
ಮಾನವ್ಯದೊರೆಗಲ್ಲು ನಲ್ನುಡಿಯ ಸವಿಸೊಲ್ಲು-
ವೇದೋಕ್ತಿಗೆಣೆ ಗಾದೆಯು

೨೬

"ಹೆಣ್ಣ ನಡೆಯನ್ನಿಂತು ಹಿಂದುಮುಂದರಿಯದೆನೆ
ಹೇಯಭಾವದಿ ಹಳಿದ ನಿನ್ನಗ್ಗಳಿಕೆಗೆ, ಛಿಃ
ಹೇಸಿದೆನು, ರೋಸಿದೆನು. ಬಂಧುವೆಂದೊರೆದೆನ್ನ
ಬಾಯೆ ಹೊಲೆಯಾಯಿತಲ! ಹೆಚ್ಚು ಮಾತುಗಳೇಕೆ?
ಹೊಳಹುಗುಂದುವುದೆ ಮಣ್ಣಡಿಗೆ ಬಿದ್ದರು ಹೊನ್ನು?
ಪಾಪಿ ಮಿಂದರೆ ಪುಣ್ಯಗಂಗೆ ಕಲಕುವಳೇನು?
ನಿನ್ನ ದೂಷಣೆಯಿಂದ ತಾಯ್ನುಡಿಗೆ ಕುಂದೇನು?
ಗೂಗೆ ನೇಸರ ಹಳಿಯದೆ?"

೨೭

ಎಂದು ಧಿಕ್ಕರಿಸಿ ಬೆಂದಿರುಹಿದನು ಸುಕುಮಾರ
ತನ್ನವರನೊಡಗೊಂಡು ತಂದ ಕಾಣಿಕೆಗಳನು
ಹಿಮ್ಮರಳಿಸಿದನು ಭಂಡಾರಕ್ಕೆ! ಭವಭವದ
ಪುಣ್ಯೋದಯದ ಮುಂಬೆಳಗಿನಂತೆ ವೈದಳೆದು
ಮೂಡಿಬಹ ಸುಕೃತಿರೂಪವ ತನ್ನದಲ್ಲೆಂದು
ಜಾಡಿಪರೆ? ಸಂಜೀವಿನಿಯು ಬೇರನರಸುತಿರೆ
ಮೂಲಿಕೆಯೆ ಕಾಲ್ತೊಡಕೆ ಕಿತ್ತೆಸೆದು ಹೋಗುವರೆ?
ನರನಂತೆ ಜನ ಮರುಳರೆ?

೨೮

ಹೃದ್ಗತಿಯ ತಿಳಿಯೆನೆನ್ನುತ ವೈದ್ಯ ತನ್ನುರವ
ಬಗಿದು ಎದೆಗುಂಡಿಗೆಯ ಪರಿಕಿಪುದೆ? ಜೇಂದೊಟ್ಟೆ
ಜಿನುಗಿದರೆ ನಾಲಗೆಯ ನೀಡಿ ಸವಿಯದೆ ಹುಳದ
ಬಳಗಕ್ಕೆ ಕಲ್ಲೆಸೆದು ರೊಚ್ಚೇಳಿಪುದೆ? ಪಾಂಥ
ಬಾಯಾರಿ ಬರೆ ಸಿಗುವ ಬಾಂದೊರೆಯ ಮೂಲದಲಿ
ಹೊಲಸೆಂದು ಶಂಕಿಪುದೆ? ಕಜ್ಜಾಯ ಕಹಿಯುಂಟೆ?
ನವನೀತದಲಿ ಕಲ್ಲೆ? ಬಿದಿರೆ ಕಬ್ಬಿನ ಜಲ್ಲೆ?
ನಾರುವುದೆ ಬಿರಿವ ಮೊಲ್ಲೆ?

[ನೋಟ ಐದು]

ಮಾರಣೆಯ ದಿನ ಸಾವಿನುಳಿವಿನ
ಸಮರ ತೊಡಗಿತು! ಬಭ್ರುವಾಹನ
ಅರ್ಜುನರ ಕೋಲ್ಮೊನೆಯ ಕುಣಿತದ
ಕಿಡಿಯ ಹಬ್ಬುಗೆಯಿಂದ ತಾರಗೆ-
ಗಳ ಸಮೂಹವೆ ಜಗುಳಿತೆನ್ನಲು
ತುರುಗಿ ಭೀಷಣವಾಯ್ತು! ಹುಟ್ಟಿನ
ಕ್ಷೇತ್ರ ನಿರ್ಮಲವೆಂದು ತನ್ನಯ
ಪಾತ್ರಪಾವಿತ್ರ್ಯವನು ತೋರುವ
ದಿನ ಬಭ್ರುವಾಹನನಿಗೆ. ೧

ತುಂಗ ಶೌರ್ಯೋತ್ಕರದ ಶೈಲದ
ಶೃಂಗದಲಿ ಹೆದ್ದೀವಿಗೆಯನುರಿ-
ಗೊಳಿಪದಿನ; ವಿಶ್ವಾಂತಕೀರ್ತಿಯ-
ನುಳಿಪದಿನ! ಈ ವರೆಗೆ ರಣದಲಿ
ಮಲೆತು ಮಣಿದವರುಂಟು; ಆದರೆ
ಮಣಿದು ಮಲೆತವರಿಲ್ಲ. ತನ್ನದೆ
ಮೆಟ್ಟಿ ನಡೆದಾ ಬಣಗು ಪೋರನ
ಕುಟ್ಟಿ ಹುಡಿಗೈಯುವರೆ ಗರ್ವದ
ದಟ್ಟಣೆಯ ಹಟ ನರನಿಗೆ. ೨

ಬನರದೆಸಕದ ಬಿರುಸು ಹೆಚ್ಚಿತು.
ನಿಮಿಷ ನಿಮಿಷಕೆ ಕುವರನೆಸುಗೆಯು
ಖಣಿ ಖಚಿಲು ಮಿಗಿಲಾಯ್ತು! ಕೈತವ
ಚಳಕ ಮಿಕ್ಕಿತು! ಕಣೆಕಣೆಯು ಕೂ-
ರ್ನೆಯು ಗಸಣಿಯು ಮೇರೆವರಿಯಿತು.
ನರನ ಎಳವೆಯು ಸಾಸದುಕ್ಕಿನ
ನೆನಹು ಮರುಕೊಳಿಸಿತ್ತು ಹಿಂದಣ
ಬಿನ್ನಣವ ಕಂಡವರಿಗಿಂದಿನ
ಕುವರನಾಳ್ತನ ನೋಟಕೆ. ೩

ಹಿಂದೆ ಗಳಿಸಿದ ಹೆಸರ ಬಲುಹಿನ
ಹೊಂದಿಕೆಯೆ ಒಂದಲ್ಲದಿಂದಿನ
ಪಾರ್ಥನಲಿ ವೈಶಿಷ್ಟ್ಯವೇನಿದೆ?
ಎಂಬೆಣಿಕೆ ಮೂಡುವುದು ಎಳೆಯನ
ಗಂಡುಗೈತವ ಕಾಣುತಿರೆ! ಸುರ
ವೃಂದ ವೈಮಾನಿಕರು-ಬೆರಗಿನ
ಕಂದರದಿ ಕೆಡೆದಂತೆ, ಮಿಂಚಿನ
ದೊಂದಿಯನು ತೊಡೆದಂತೆ, ಕಣ್ಣೆವೆ
ಮಿಸುಕದಾದರು ನಿಮಿಷಕೆ. ೪

ಅಲ್ಲಿ ಅರಮನೆಯಲ್ಲಿ ಚಿತ್ರಾಂ-
ಗದೆಯು ಎದೆಯೊಲೆಯಲ್ಲಿ ಕಾತರ
ಕಾಷ್ಠವನ್ನುರಿಗೊಳಿಸಿ ಕೊರಗಿನ
ಕೊಳನಡುವಳು! ಧರ್ಮಸಂಕಟ,
ಅಕಟಕಟ! ಕಾಷಾಯವಸನೆಯು
ಮೊದಲೆ; ಇಂದೋ- ಇಷ್ಟದೈವದ
ಮುಂದೆ ಬೇಡುತ್ತಿಹಳು ಕೈಗಳ
ಜೋಡಿ; ಕಂಗಳು ಕೋಡಿ ಹರಿವಿನ
ಹೊನಲ ಹೊಮ್ಮಿಸುತಿದ್ದವು. ೫

ತಾಯ್ತನದ ವಾತ್ಸಲ್ಯವೊಮ್ಮೆಗೆ
ಮಿಕ್ಕಿದರೆ, ಹೆಣ್ತನದ ನಲುಮೆಯು
ಉಕ್ಕುತಿರೆ ಮಗುದೊಮ್ಮೆ, ಕರುಳನು
ಸೀಳಿದಂತಾಯ್ತೊಮ್ಮೆ; ಎದೆಯನು
ಹೋಳಿದಂತಾಯ್ತೊಮ್ಮೆ! ಯಾರಿಗೆ
'ವಿಜಯವಾಗಲಿ' ಎಂದು ಬೇಡಲು
ಬಲ್ಲಳಕಟಾ? ಬಸಿರ ಕಂದನು
ಒಬ್ಬನಾದರೆ ತನುಮನಕೆ ಅಧಿ
ದೈವ-ಪತಿ-ಮಗುದೊಬ್ಬ! ಕಂಗಳೊ
ಳಾವುದೆರಡಲಿ ಮುಖ್ಯವು? ೬

ತತ್ತರಿಸಲಂಗಾಂಗ, ಬಗೆಯನು
ಕತ್ತಲಿಸೆ, ಹೊಲಬರಿಯದಡವಿಯ
ಸುತ್ತುವಂತಾಯ್ತಳಲ ಬವಣಿಗೆ!
ಹೊತ್ತುವೆದೆ ಬೇಗೆಯಲಿ ಕರಗಿದ
ಮುತ್ತುಗಳೊ? ಬಾಗುಳಿನ ಮೊಳಕೆಯ
ಬಿತ್ತುಗಳೊ? ಕಣ್ಣೀರ ಕಾಲುವೆ
ಯಲ್ಲಿ ಮಿಂದಳು. ಒದ್ದೆ ಬಟ್ಟೆಯ
ತವಸಿನಿಯ ತೆರ ತೋರುತಿದ್ದಳು
ಮಣಿಪುರದ ಮಾರಾಣಿಯು. ೭

"ವಿಧಿಯ ಚದುರೋ? ಎನ್ನ ಭಾಗ್ಯದ
ನಂದನವೆ ಮುಳ್ಳುಗಳ ಹೊದರೋ?
ಒಂದೆರಡೆ? ಹದಿನೆಂಟು ವರುಷವ
ನವೆದೆನೆಂತೋ ಮುಂಬರುವ ಸೊಗ
ವನು ನಿರೀಕ್ಷಿಸಿ! ಆದರಿಂದಿಗೆ
ಜೀವನದ ಘಟವೊಡೆಯಿತೆಂಬೆನೆ?
ಬೇವ ಬಡಿಸಿದನೆಂಬೆನೇ ವಿಧಿ
ಬಾಳ ಬಟ್ಟಲಿಗೆಲ್ಲ ಕನಸಿನ
ಗಾಳಿಗೋಪುರವಾದುದೆ? ೮

"ಸ್ವಾಮಿ ಬಂದಿಹರೆಮ್ಮ ನಾಡಿಗೆ,
ತೆರೆದ ಕೈಗಳಲೆನ್ನನೂ ನಿಜ
ತನಯನನ್ನೂ ತಬ್ಬುವರು; ಮೈ
ದಡವಿ, ತಲೆಮುಂಡಾಡಿ ಕೊಂಡಾ-
ಡುವರು ಎಂದಿರೆ ಕತ್ತಿಗೈಯೊಳೆ
ತಂದೆ ಮಕ್ಕಳು ಒಬ್ಬರೊಬ್ಬರ
ಕಾದಿ ಗೆಲುವಂತಾದ ನೋಟವ
ಕಾಣಲೇ? ಅಯ್ಯಯ್ಯೊ ಕಣ್ಣನೆ
ಕೀಳಲೇ? ಕುತ್ತಿರಿಯಲೆ? ೯

"ಹೊಲ್ಲೆಹದ ನಡತೆಯಲಿ ಹುಟ್ಟಿದ
ಜಳ್ಳೆನುವ ಅಪವಾದ ತಟ್ಟಿದ
ಕಂದನೋ ಹುಣ್ಣಿಮೆಯ ಚಂದಿರ
ರಾಹುದಂಶನಗೊಂಡನೋ- ಎನೆ
ಖಿನ್ನನಾಗಿಹನವನ ಕಂಡರೆ
ಕರುಳೆ ಕೊರೆವುದು. ಎನ್ನ ಕಣ್ಮಣಿ,
ಸಾಹಸದ ಖನಿ, ಕುವರನೆನ್ನಯ
ಸ್ವಾಮಿಯಹ ಲೋಕೈಕವೀರಗೆ
ಸಾಟಿಯಿರುವನು ಕಾಣದೆ? ೧೦

"ಹೊತ್ತ ನೆಲ ಮೇಲಾಗಸವು, ರವಿ
ಶಶಿಗಳೆಮ್ಮಯ ಕುಲದ ಬಲುಹಿನ
ಸತ್ಯ ದೈವಗಳೆಲ್ಲ ಅರಿವವು
ನಿಜದ ನೆಲೆಯನು! ಆದರಿಂದಿಗೆ
ಅರಿತು ಮಾಡಿದರೇನು? ಯಾರೂ
ಎನ್ನ ಕಂದನ ಎನ್ನ ಸ್ವಾಮಿಯ-
ನಿಂದು ಒಕ್ಕೈಸುವರೆ?" ಎನ್ನುತ
ಬೆಂದ ಬಯಕೆಯ ಬಾಗುಳಿನ ಕಹಿ
ಪಾಕವನ್ನುಣುತಿದ್ದಳು. ೧೧

ಅಳಲಭಾರಕೆ ಮೂಕ ಸಂಕಟ
ಹೊರೆಯು, ಉಮ್ಮಳದೊಸರುಗಂಗಳ
ತೊರೆಯು, ಕತ್ತಲ ಮುಸುಕಿನಲಿ ಮನ
ಮರೆಯು, ಕೊಂತದ ತಿವಿತಗರುಳಿನ
ಮೊರೆಯು, ದಿಙ್ಮೂಢತೆಗೆ ಸ್ವೈರಣೆ
ಸೆರೆಯು, ಶಾಂತಿಯ ಸಾಗರದಿ ಸುಳಿ-
ದೆರೆಯು,- ಆಯಿತೊ? ಹರಿಯಿತಡಗಿತೊ?
ಮಿಕ್ಕಿತೋ? ಸಿಕ್ಕಿತ್ತೊ? ಉಕ್ಕಿತೊ?
ಯಥಾಸಂಖ್ಯೆಯೆ ಯಾತನೆ? ೧೨

ಅಮೃತಕುಂಭದ ನಡುವೆ ನಂಜಿನ
ಬಿಂದುವೇ? ಜೇಂದೊಟ್ಟೆಯಲಿ ಅಳಿ
ಜೇಡನೇ? ತಂಗದಿರ ಚೆಲ್ಲಿಕೆ
ಬೇಗೆಯೋ? ಬೆನ್ನೀರೆ ಬಾಂದೊರೆ?
ಕಾಮಧೇನುವು ಕರೆವ ಹಾಲೇಂ
ಮದಿರೆಯೋ? ನವನಿಧಿಯ ಭಂಡಾ-
ರದಿ ವರಾಹದ ದಾಡೆಯೋ? ಹಾ!
ತವಸಿನಿಯ ಪುಣ್ಯೋದಯುದ ಹೊಂ-
ಬೆಳಕು ತಾಮಸವಾದುದೆ? ೧೩

ಹಾಲ್ಗಡಲ ಮಥನಕ್ಕೆ ಹಾವಸೆ
ಮುದ್ದೆ ಬೆಣ್ಣೆಯೆ? ಕುದಿದು ಕೋವೆಯು
ಲಿದ್ದ ಚಿನ್ನಕೆ ಕಬ್ಬಿಣದ ಎಳೆ
ಅದುರೆ? ನಿರ್ಜರನಂದನದ ನಡು
ತುರುಸು ಬಳ್ಳಿಯೆ? ಸಾಮವೇದಕೆ
ಶ್ರುತಿಯು ಕರಟದ ಕರ್ಕರವೆ? ನರು
ನಿಂಬೆ ಹಣ್ಣಿನ ನಡುವೆ ಉಪ್ಪಿನ
ಹರಳೆ? ಯೋಗಿನಿ ಪ್ರೇಮ ಯಜ್ಞದಿ
ಹಗೆಯ ಹೊಗೆಯನೆ ಕಂಡಳೆ? ೧೪

ಸೋವಿನುಂಗುಟ ಎಡವಿ ಬೇನೆಯು
ಮರಳಿ ಮರುಕೊಳಿಸುವುದು; ಬೇಗೆಯ
ಬಿಸಿಲಿನಲಿ ಬೆಂಡಾದವಗೆ ಅತಿ
ತೃಷೆಯು ಇಮ್ಮಡಿಸುವುದು; ರೋಗಿಯ
ರಸನೆಯೇ ಕಹಿಯಾದರೂ ಲಾ-
ಲಸೆಯು ಬಳೆವುದು ತಿನ್ನಲಾಗದ
ವಿಷಯದಲಿ; ಸಂಕಟಗಳೊತ್ತರ
ಕಾಡುವುದು ಸಾಲಾಗಿ! ದೇವಿಯ
ಪಾಡು ಏನಪವಾದವೆ? ೧೫

ಕಣ್ಣ ಧಾರೆಯು ಹೊಯ್ಲು ಹೊಡೆತಕೆ
ಹುಲ್ಲಿನೆಳೆ-ಎನೆ, ಬಿಗಿದ ಕಂಠದ
ಉಬ್ಬಿಕೆಯು ಬಿತ್ತರವ ತಾಳದೆ
ಉಡಿಯಿತೋ ಎನುವಂತೆ, ಐದೆಯ
ಕೊರಳ ಮಂಗಲಸೂತ್ರ- ಆಹಾ!
ಕಡಿದು ಬಿದ್ದಿತು! ನೋಡಿ ನಡುಗುತ
ಅಳಲ ಮುಕ್ಕುಳಿಸಿದಳು; ತಾಳದೆ
ಬವಳಿ ಮೂರ್ಛಾಪನ್ನೆಯಾದಳು
ಸದ್ದು ಸುಳಿವುಗಳಿಲ್ಲವು. ೧೬

ಖೇದದುರಿಯಲಿ ಬಾಳ ಹೊನ್ನನು
ಕಾದು ಕೆಂಪೇರ್ವನಕ ಕಾಯಿಸಿ,
ನೋದ ಜಲದೊಳಗದ್ದಿ, ತೆಗೆದು ವಿ-
ಷಾದದುಕ್ಕಿನ ಸುತ್ತಿಗೆಯ ಬಡಿ-
ದಾದ ಮೇಲೊರೆಗಲ್ಲ ಬನ್ನಕೆ
ತೀಡಿ ಬಣ್ಣವ ಪರಿಕಿಸುವ ವಿಧಿ!
ನೋಡ! ನಿನ್ನ ಪರೀಕ್ಷೆಯಾಟದ
ಪಾಡ; ದೇವಿಗೆ ಮುಡಿದ ಹೂವದು
ಬಾಡಿದರೆ ನೋಡೆಚ್ಚರ! ೧೭

[ನೋಟ ಆರು]

೧

ಗೆಲ್ಲವೆಣ್ಣಿನ ಮುಡಿಯು ಎಳೆತರುತ ಬಹ ಜೀರ
ಬಲ್ಲಹನು ಕಂಡ ನೋಟವಿದೇನು? ಅಕಟಕಟ!
ಎಲ್ಲ ವಿಪರೀತ! ನೆತ್ತರಿನ ಓಕುಳಿಯನ್ನು
ಚೆಲ್ಲಾಡಿ, ಮಿಂದು ಮಡಿಯಾದ ಧೌತಾಸಿಯನು
ಒರೆಗಾಣಿಸಿದ ವೀರ ಒಡನೊಡನೆಯೇ ತನ್ನ
ವಿಜಯವಾರ್ತೆಯನು ತಾಯಿಗೆ ತಿಳುಹಬೇಕೆಂದು
ಬಿಜಗೈದನಹುದು! ಆದರೆ ತಾಯಿ ಬಿದ್ದಿಹಳು,
ಸದ್ದಿಲ್ಲ ಉಸಿರಿಲ್ಲ ನಿಶ್ಚಲವು ನಿಷ್ಪಂದ!

೨

ನೈರ್ಮಲ್ಯ ನಿಷ್ಠೆ ನಿಯಮಗಳೆ ಕಾರುಣ್ಯರಸ
ಸ್ರೋತದಲಿ ಕರಗಿ ರೂಪೊಡೆದು ಪುಣ್ಯಾಂಗನೆಯ
ವಪುವಡೆದು ಅವತರಿಸಿ ಮಾತೆಯಾದವಳಿಂದು
ಈ ಜಗದ ನಿಷ್ಠುರತೆ ಕರ್ಕಶತೆಗಳ ಕಂಡು
ಸೈರಿಸದೆ ರೋಸಿ ಮೊಗದಿರುಹಿ ನಡೆದಳೊ! ಎನಲು
ದೇಹ ಕೆಡೆದಿತ್ತಲ್ಲಿ! ಇಷ್ಟಮೂರ್ತಿಯ ಬಿಂಬ
ವಿಕಟಾಟ್ಟಹಾಸದಲಿ ವಿಲಯವೇದಿಕೆಯಲ್ಲಿ
ನಿಂದಂತೆ, ನಲಿವಂತೆ, ನುಲಿವಂತೆ ತೋರಿತ್ತು.

೭

ಹೊತ್ತಿಸಿದ ಹೊಂದೀವಿಗೆಯು ಕರಿಕುಗಟ್ಟಿತ್ತು.
ಪೂಜೋಪಕರಣ ಚೆಲ್ಲಿಹವು; ಪೀಠದ ಮೇಲೆ
ಕಿರುಹಣತೆಯೊಂದೆ ಮಿಣುಕುತಲಿತ್ತು; ಸುತ್ತಣಿನ
ಹಾಲುಗಲ್ಲಿನ ಗೋಡೆಗಳಲಿ ತನ್ನದೆ ರೂಪು
ಪಡಿಮೂಡಿ ಎದುರೆದುರೆ ಹಲವಾಗಿ ತನ್ನನೇ
ಹೀಗಳೆವವೆನೆ ಭಾಸವಾಯ್ತು! ಏಕೆಂದರಿಯ!
ಭ್ರಮೆಯಾಯ್ತು! ನಡೆದುದೇನೆಂದರಿಯ! ಧೃತಿಯೆದ್ದು
ಮಗುಳೊಮ್ಮೆ ಸೋಜಿಗಕೆ ಶರಣೆಂದು ಮರೆಯಾಯ್ತು.

೮

ಊರಿಂಗೆ ಅರಸು, ವೀರರ ವೀರ, ಮುಳಿವವರ
ಭೈರವನು, ಆದರೂ– ತಾಯಿಗೇಂ ಮಗನಲ್ತೆ?
ಗೆದ್ದ ಗೆಲವಿನ ಬಗೆಯ ಮಂಜು ಕರಗಿತು; ಕರಗಿ
ಕಣ್ಗೊನೆಯ ಹನಿಯಾಯ್ತು! ಎದೆಯಲ್ಲಿ ಕನಿಕರದ
ಕಾಸಾರವಿಹುದೇನೊ! ತಾಯ ರೀತಿಯ ಕಂಡು,
ಬಜ್ಜರವೆ ಹೂವಾಗಿ ಮಾರ್ಪಟ್ಟುದೆನುವಂತೆ,
ದಳ್ಳುರಿಯೆ ಶೀತಲಕೆ ದತ್ತವಾಯ್ತೆನುವಂತೆ
ಮೆದುವಾಗಿ ತಣಿದು ಸಣ್ಣಾಗಿ ಮುದುಡಿದನಂತೆ!

೯

ಮಗಸಾಗಿ ಬಾಗಿ ಕೂಸಾಗಿ ಕಣ್ದುಂಬಿದನು.
ಬಿಕ್ಕಳಿಸಿ "ಅಮ್ಮ ಅಮ್ಮಾ" ಎನುತ ಗೋಳ್ಗರೆದು
ಕರೆಕರೆದು, ಸಸಿಹ ಧಾವಿಸಿ ತಲೆಯ ದೆಸೆ ಕುಳಿತು
ಪಾರಿಜಾತದ ಹೂವ ಹಿಡಿವಂತೆ ಎತ್ತಿದನು.
ಎತ್ತಿ ಮಲಗಿಸಿ ಎದ್ದು ತೀರ್ಥೋದಕವ ತಂದು
ಸಿಂಪಡಿಸಿದನು. ಸೆರಗಿನಲಿ ಬೀಸಿ ಉಪಚರಿಸಿ
ಮತ್ತೆ ಬಾಯ್ದುಂಬಿ "ಅಮ್ಮಾ ಅಮ್ಮ ಅಮ್ಮ" ಎನು–
ತತ್ತು ಕರೆದನು ಹಲುಬಿ ಸೈರಣೆಯನೀಡಾಡಿ.

೬

ಅರೆಗಳಿಗೆಯಲಿ ದೇವಿ ಅಲಸುಗಣ್ಣನು ತೆರೆದು
“ಅಪ್ಪಯ್ಯ ಬಂದೆಯಾ?” ಎಂದಳಾರ್ತಸ್ವರದಿ!
“ತಾಯೆ ಕಳವಳವೇಕೆ? ವೀರಮಾತೆಯೆ ನಿಮ್ಮ
ಪುಣ್ಯೋದರದ ಭಾಗ್ಯಕೆಲ್ಲಿ ಊಣೆಯವಮ್ಮ?
ಸೋಲೊ ಗೆಲವೋ ಎಂಬ ಶಂಕೆ ಸಂದೇಹಗಳ
ಜಾಲದಲಿ ಬಳಲಿದಿರಿ. ಸೈರಣೆಯ ಕೊಳಬೇಕು.
ಬಿದ್ದೋಡಿ ಬರುವೆನೇ? ಗೆದ್ದು ಬಂದೆನು ತಾಯಿ!”
ಎನ್ನುತಿರೆ, ಮರಳಿ ಭೋರೆಂದಳುತ ಕೇಳಿದಳು.

೭

“ಕಂದಯ್ಯ, ಬಂದವರ ಗತಿಯೇನು ಹೇಳಯ್ಯ”
ಎಂದರೆಂದನು “ತಾಯೆ ತಮ್ಮಡಿಗೆ ಹೊಲ್ಲೆಹವ
ಎರಚಿ ಭಂಗಿಸಿದವನ ಬಾಯ ಸೀಳದೆ ಬಹೆನೆ?
ದೊಣೆಯ ತೀವಿದ ಕಣೆಯ ಸೆಳೆಯುತಿರೆ ನಡೆದೊಂದು
ವೈಚಿತ್ರ್ಯವೇನೆಂಬೆ! ಹೊಳೆದು ಹೊಮ್ಮಿಂಚಿನೋಲ್
ಬಾಣ ಬಂದಿತು ಕೈಗೆ. ತಿರುವಿಂಗೆ ತೊಟ್ಟೊಡನೆ
ದಿವ್ಯದೀಪ್ತಿಕೆಯ ಮಿಗಿಸಿತ್ತು. ವೈರಿವ್ರಾತ
ದಿಙ್ಮೂಢತೆಯ ಹೊದ್ದು ಬೆಳ್ಪಳಸಿ ನಿಂದಿತ್ತು.

೮

“ಪಾರ್ಥನುದ್ಧತಿಯ ಪರ್ವತಕೆ ಸಿಡಿಲಾಯ್ತುದುವೆ!
ಎದುರಾಗಿ ಸಂಹೃತಿಗೆ ತೊಡಗಿಲ್ಲ; ವಿಸ್ಮಯವು!
ಹಿಂದು ಮುಂದರಿಯದವನಂತೆ ನಿಶ್ಚಲನಾದ.
ಬಿಡುವ ಮೊದಲೇ ಶರಾಸನದಿಂದ ಚಿಮ್ಮಿತೆನೆ
ಓಡಿತಾ ದಿವ್ಯಶರ ಬಿದ್ದುರುಳಿ ಹೋದ ನರ!”
ಎಂದ ಬಣ್ಣನೆ ಕೇಳಿ ಚಿಟ್ಟೆಂದು ಚೀರಿದಳು.
ಮರಳಿ ಬಸವಳಿದು ಬವಳಿದಳು. ಕುಳಿತಲ್ಲಿಂದ
ಉರುಳಿ ಬೀಳುವ ಮೊದಲೆ ಹಿಡಿದಾಧರಿಸಿಕೊಂಡ!

* * * ೯ * * *

ಎದೆಯೊಲೆಯ ಮೇಲೆ ಕುದಿಕುದಿವೆಸರ ಆವಿಯೊಳು
ತೀವಿರುವ ತುಂತುರೆನೆ, ಕರುಳ ಬಳ್ಳಿಯು ಬೆಂಕಿ
ಉಚ್ಚಳಿಪ ಕಿಡಿಗಳೆನೆ, ಜೀವನೋದ್ಯಾನದಲಿ
ಬೆಳೆದ ಜಾಲಿಯು ಮರದ ಮುಳ್ಳಿರಿದು ಚುಚ್ಚಿತೆನೆ,
ಕೊನರ್ಗುಡಿಯು ಕೋಲ್ಗೆ ಕಣ್ಣೀರ ಧಾರೆಯ ಬಿಗಿದು
ಕಾರುಣ್ಯಕ್ರಂದನದ ಕಸೆಗೋಲನಣಿಗೈದು
ಮಗನ ಮನಸಿನ ಬಿರುಸುತನವ ಶಿಕ್ಷಿಸುವಳೆನೆ
ದೇವಿ ಹಲುಬುತ ಜರೆದು ಬಿರುನುಡಿಯನಾಡಿದಳು.

೧೦

ಮಸೆದು ತೀಡಿದ ಚಂದನದ ತರುವಿನಿಂದೆದ್ದ
ಉರಿ ಶೈತ್ಯವೇ? ತಾಯ ಮೃದುಹೃದಯದಿಂದ ಬಿರು
ನುಡಿ ಬರಲು ಸಹ್ಯವೇ? ನವನೀತವಾದರೂ
ಕುದಿವಾಗ ಸುಡದಿರುವುದೇ ಸಿಡಿವ ಸೀರ್ಪನಿಯು?
ಕಿವಿಗಳೆರಡನು ಮುಚ್ಚಿ ದೀನಾರ್ತ ಯಾಚನೆಯ
ದೇವಿ ಹೇಳಿದಳಿಂತು "ಸಲ್ಲಿಸಾ ಬಣ್ಣನೆಯ;
ನಿನ್ನ ಶೌರ್ಯದ ಕಥೆಯ; ಸಾಕಿನ್ನು– ಅರಿವಾಯ್ತು!
ಜ್ಯೋತಿಯಾರಿತು, ಕಣ್ಣ ಬೆಳಕು ನಂದಿತು ಸಾಜ!

೧೧

"ರಣರಂಗದಲ್ಲಿ ಏನಾಗಿದ್ದಿತೋ ಅದರ
ಸಂಕೇತವೆನಗೆನ್ನ ಮಾಂಗಲ್ಯ ಕಡಿದಾಗ
ಮೊದಲೆ ತಿಳಿದಿತ್ತಿನ್ನು ಮುಂದೆ ಹೇಳಲು ಬೇಡ!
ಬಹು ಸಾಹಸದ ಕಾರ್ಯವೆಸಗಿ ಬಂದೆಯ, ಅಮಮ!
ಪುಣ್ಯ ಗಳಿಸಿದೆಯಣ್ಣ – ಹೆತ್ತಯ್ಯನನು ಹೊಡೆದು;
ಆ ಪುಣ್ಯಫಲ ಪೂರ್ಣಸಿದ್ಧಿಯಾಗಲುಬೇಕು;
ಹಿಡಿದ ಕೂರಸಿಯಿಂದ ತರಿಯೆನ್ನ ತಲೆಯನ್ನು. .
ರಣಯಜ್ಞಕಿಂತು ಪೂರ್ಣಾಹುತಿಯ ಕೊಡು ಕಂದ!

ನಲ್ಕತೊಂಡು

೧೨

"ಬಾಳುವೆನೆ ಬಿಟ್ಟೆನ್ನ ಬಾಳ ಬೆಳಕನು? ಅಯ್ಯೊ!
ತಾಳುವೆನೆ? ಇನ್ನೆಲ್ಲಿ ಯಾವಾಸೆಯುಳಿದಿಹುದು?
ಮುತ್ತೈದೆಯಾಗಿದ್ದು ಪತಿಗೆ ಬೇಡದೆಹೋದೆ!
ಅಪವಾದವನು ಹೊತ್ತೆ, ವೈಧವ್ಯವನ್ನಾಂತೆ!
ಇಂತು ಬದುಕಿನ ನಡುವೆ ಸತ್ತಿರುವೆನೀ ಮೊದಲೆ;
ಆದರೂ ಉಸಿರೆಳೆಯುತಿಹುದು ದೇಹದ ಗೊಂಬೆ.
ಇದರಸ್ತಮಾನದಲಿ ಉದಯ ಮೂಡಲಿ ಮುಂದೆ.
ಕೊನೆಗಾಣಿಸೆನ್ನ ಕೈಜೋಡಿ ಬೇಡುವೆ ತಂದೆ!

೧೩

"ತಾತನನು ಕಂಡರಿಯದಾ ಹಸುಳೆ – ಎನುತ, ಅತಿ
ವಾತ್ಸಲ್ಯಭರದಿಂದ ಲಾಲಿಸಿದ್ದೆನು ಮಗನೆ!
ನಿನ್ನನಪ್ಪುವ ವೇಳೆ - ಒಂದು ಕೈಯೊಳಗೆನ್ನ
ತಾಯ್ತನದ ಭಾವದಲಿ, ಒಂದು ಕೈಯೊಳು ನಿನ್ನ
ತಂದೆಯ ವಿಭಾವದಲಿ ತಬ್ಬುತಿದ್ದೆನು; ಅಂತೆ
ಎರಡು ಮುತ್ತನ್ನಿಟ್ಟು ಉಭಯಾನುಭಾವದಲಿ
ಮುಳುಗಿ ಹೊಂಪುಳಿಹೋಗಿ ಮರುಮರುಗಿ ಮುಂಬರುವ
ಸೊಗ ಸಿರೀಕ್ಷಿಸಿದ ಫಲ ಸಿಕ್ಕಿದುದು ಸರಿಯಾಯ್ತು!

೧೪

"ತುಲಸಿ ಬೀಜಕೆ ತುರುಚೆಬಳ್ಳಿ ಮೊಳೆಯೀ? ಹುಲಿಗೆ
ಪೋದ ಮರಿ ಕೂಸೆ? ಲೋಕೈಕವೀರನ, ಪಿತನ,
ಕೊಲೆಯ ಕೊಂಡಾಟದಲಿ ಕೀರ್ತಿಭಾಜನನಾದೆ!
ಸಲುವ ಪುರುಷಾರ್ಥಗಳ ಪರಮಾರ್ಥವನು ಪಡೆದು
ಮೆರೆವೆನ್ನ ಕಂದ ಜಾರೆನ್ನನಿರಿ, ಕೊರಳ ತರಿ;
ಎನ್ನ ದೇವನನಿರಿದ ಕೂರಸಿಯು ಪಾವಿತ್ರ್ಯ
ದ್ವಿಗುಣಿಸಲಿ! ಸಗ್ಗದಲಿ ಲೌಕಿಕದ ನಿರ್ಬಂಧ -
ವಿಲ್ಲಲೇ? ಪ್ರಾಣೇಶಸನ್ನಿಧಿಯ ಸೇರಿಸೈ."

೧೫

ಹೂವು ಹೊಚ್ಚಿದ ಸರಳು ಮೊಸೆಯೂರಿ ನೆಗಹಿತೋ?
ತಾಯ ಮಮತೆಯ ಮೆಲ್ನುಡಿಯೆ ಕಿವಿಯನುಗುಳಿತೋ?
ಕಾದ ಸೀಸದ ಬಿಂದು ಕಿವಿದೆರೆಗೆ ಜಗುಳಿತೋ?
ಕೈಜೋಡಿ ತಲೆವಾಗಿ ನಿಂದ ವೀರಕುಮಾರ -
ಸ್ವರ್ಗೀಯತೆಗೆ ಮಣಿದ ಲೌಕಿಕದ ಸಿರಿಯಂತೆ,
ಶಿವೆಯ ಸನಿಹದಿ ನಂದಿಯಂತೆನೆ ದಿಲೀಪನೃಪ
ವಾಸಿಷ್ಠಧೇನು ನಂದಿಸಿಯ ಪೂಜಿಸುವಂತೆ
ತೋರುತಿದ್ದನು ತನ್ನ ತಾನೆ ಮರೆತವನಂತೆ.

೧೬

ಭಕ್ತಿಭಾರಕೆ ಕುಬ್ಜವಾದಂತೆ ಕೊರಳುಬ್ಬಿ
ನರವು ನೆಗೆದಿತ್ತು. ಬಾಡಿದ ಮಲರಿನೆಸಳಂತೆ
ಕಣ್ಣರ್ಧ ಮುಗಿದಿತ್ತು. ಅಂತಃಕರಣ ಕೋಶ
ಕಾರುಣ್ಯರಸದುಂಬಿ ಒಸರಾಗಿ ಹರಿಯಿತೆನೆ
ಸರ್ವಾಂಗ ಬೆವರಿತ್ತು. ಪಾಪ ಪಶ್ಚಾತ್ತಾಪ
ದಗ್ಧದೇಹವ ತಣಿಸೆ ಗಂಗಾವತರಣವೆನೆ
ಕಂಗಳಲಿ ಜಲಧಾರೆ! ಶಮೆಯ ಮಂತ್ರೋಚ್ಚರಣ -
ಎನೆ ತುಟಿಯ ಮಿಡುಕ! ಶೂನ್ಯವ ಹೊದ್ದ ನೈನಡುಕ!

೧೭

“ಅಕಟಕಟ! ಮಾತಾಯೆ, ಹಳಿಯದಿರಿ ಮನು ಮಾತೆ!
ಅಳಲ ಬೆಂಕಿಯ ನಡುವೆ ಬೆಂದವರು ಬಾಳಿನಲಿ,
ಶೋಕವಿಹ್ವಲೆಯಾಗಿ ಸೈರಣೆಯನುಳಿದಿಹಿರಿ!
ಆದರೂ ಪರುಷೋಕ್ತಿಯನು ನುಡಿವ ಹೆಲ್ಲಣೆಗೆ
ಸಿಗದವರು, ಎಂದೆಂದು ಅಮೃತಭಾವದ ಬಗೆಯ
ಮಿಗುವವರು; ಸೆರಗಿಸೊಳೆ ಶುಭವ ಕಟ್ಟಿಟ್ಟಂತೆ
ಶಿವೆಯಾಗಿ, ದುರ್ದಮದ ಕರ್ದಮವ ತೊಳೆವ ಜಾ -
ಹ್ನವಿಯಾಗಿ ಮೆರೆದವರು; ಸಾಂತ್ವನಂಗೊಳಿ ತಾಯಿ.

೧೮

“ಸಾಗು ಹೋದುದಕಾಗಿ ನೊಂದು ಫಲವೇಸಿಹುದು?
ಮುಂಬರುವ ಶುಭದ ಹೊಂಬೆಳಕು ಹರಿಯುವ ಮುನ್ನ
ತುಂಬುಗತ್ತಲು ಕವಿಯಿತೇನೊ! ಯಾರರಿತಿಹರು?
ಕಂಬನಿಯು ವಿಷವಾರಿಧಿಯ ಮಂಥನದಿ ಅಮೃತ
ಕುಂಭವನು ಮೇಲೆತ್ತಿಗೆವ ವಿಧಿಯ ಚದುರೋ ಏನೊ!
ನಡೆವನೆಡಹುವನಾದರೂ ಕೆಡೆವ ಮುವ್ವೊದಲೆ
ಬಿಡದಾಧರಿಸಬೇಕು ಎನುವ ತತ್ತ್ವವ ಪಿಡಿದು
ಮುನ್ನಡೆವೆನಮ್ಮ ಬೀಳ್ಕೊಡಿರೆನ್ನ ಹರಕೆಯಲಿ.

೧೯

“ದ್ರವಿಡಜನದೊಳಗೊಬ್ಬ ಧನ್ವಂತರಿಗು ಮಿಗಿಲು
ಕ್ಷತಚಿಕಿತ್ಸೆಯಲೆಂಬ ವಿಖ್ಯಾತನಹ ವೈದ್ಯ
ನಿಹನಂತೆ ಕಾವೇರಿ ನದಿಯಾಚೆ! ಕರೆಸುವೆನು
ಯೋಜನೋತ್ತರವೆಂಬ ಎನ್ನ ತೇರನು ಕಳುಹಿ!
ಸ್ರಾವದಲಿ ನಿಶ್ಶೇಷ್ಟನಾದ ಗಾಯಾಳುವಿಗೆ
ಜೀವದುಂಬುವನಂತೆ ಮೂಲಿಕೆಯ ಬಲುಮೆಯಲಿ!
ಆ ವರೆಗೆ ಎಮ್ಮ ನಿಷ್ಣಾತವೈದ್ಯರು ಪಿತನ–
ನೋವುವರು” ಎನೆ ದೇವಿ ಬಾಚಿ ತಬ್ಬಿದಳವನ.

೨೦

“ಬಾರೆನ್ನ ಮರಿಯಾನೆ, ಮನನೋಯದಿರು ಕಂದ!
ನೊಂದವಳ ಎದೆಗುದಿಯ ಬಿರುಮಾತಿನಿರಿತಕ್ಕೆ.
ಸಿದ್ಧಿ ಕೈಗೊಂಬನಕ ಸಾಧನೆಯ ಮುಂಬರಿಸು.”
ಎಂದು ಹರಸುತ ತಲೆಯ ಮುಂಡಾಡುತಿರೆ ಕಣ್ಣ
ತೊರೆ ಹರಿದು ಬಭ್ರುವಾಹನನ ನಡುನೆತ್ತಿಯನು
ತೋಯಿಸಿತು, ಪುಣ್ಯಾಂಬುಸ್ನಾನವಾಯಿತು! ತಾಯ
ಚರಣದಲಿ ಶಿರವಿಟ್ಟು ಹರಕೆಯನು ತಲೆಯಾಂತು
ಹೊರವಂಟನಾ ಕುವರ ಕರ್ತವ್ಯವನು ಹೊತ್ತು.

[ನೋಟ ಏಳು]

ದೇವಿ ಚಿತ್ರಾಂಗದೆಯ ಸೆಜ್ಜಾರದಿ! ಪಾರ್ಥನನು
ಮಲಗಿಸಿಹರಲ್ಲಿ! ಹದಿನೆಂಟು ವರುಷಕೆ ಹಿಂದೆ
ಆ ಮಂಚದೊಳೆ ಅವನು ಚಿತ್ರಾಂಗದೆಯ ಹೃದಯ
ದಾರಾಧ್ಯಮೂರ್ತಿಯೈ, ಪ್ರಣಯರಾಜ್ಯದ ಅರಸು,
ಪ್ರಾಣಪದಕನು ಆಗಿ ಸುಖವಡೆದವನು; ಇಂದು
ಗಾಯಾಳುವಾಗಿ ಮಲಗಿಹನು; ನಿಷ್ಪಂದತೆಯ
ನಿಶ್ಚೇಷ್ಟತೆಗೆ ಎರಕ ಹೊಯ್ದಂತೆ-ಶವದಂತೆ!
ವಿಧಿಲೀಲೆ! ಸೆಜ್ಜೆಯೋವರಿಯ ಭಿತ್ತಿಗಳೆಲ್ಲ
ನರನ ಉದ್ಧಟತನಕೆ ಕನಲಿ ಮೌನದೊಳಿಹವೊ!
ದುರ್ಗತಿಗೆ ಮರುಗಿ ದುಃಖದ ಭಾರದಲಿ ಮೂಕ- ೧೦
ವಾಗಿಹವೊ! ಎನುವಂತೆ ನೀರವತೆ ತುಂಬಿತ್ತು.
ಉತ್ತಮರು ಕಷ್ಟಕಾಲದಿ ವೈರಿಗಾದರೂ
ಕರುಬುವರೆ? ಮರುಗುವರು.

ನರನ ಶಿರವನ್ನೆತ್ತಿ
ತೊಡೆಯನೇರಿಸಿಕೊಂಡು ದೇವಿ ತಲೆದೆಸೆಯಲ್ಲಿ
ಮಂಡಿಸಿರುವಳು. ಕಾಲ ದೆಸೆಯಲ್ಲಿ ಉತ್ಕಂಠ
ನಾಗಿ ಕುಳ್ಳಿಹ ಬಭ್ರುವಾಹನನು.

ಮತ್ತಾರು?
ದ್ರವಿಡವೈದ್ಯನು ತನ್ನ ಬಿಜ್ಜೆ ಕೈಚಳಕಗಳ
ತೋರುತ್ತಿದ್ದನು. ಮಿಕ್ಕ ರಾಜವೈದ್ಯರು ಸುತ್ತ ೨೦

ನಲ್ಲುತ್ತೈದು

ಸೆರೆದಿಹರು. ಮಾತಿಲ್ಲ ಸದ್ದಿಲ್ಲ; ಉಳಿವಿನಲಿ
ಭರವಸೆಯು ಸುಳಿವಿಲ್ಲ.
                    ಬಭ್ರುವಾಹನನಲ್ಲಿ
ಉದ್ವೇಗ ಕಾಣುತಿದೆ. ಭಾವ ಪರವಶವಾದ
ತನ್ಮಯತೆಯೊಂದೆ ಮೂಡಿತ್ತು ದೇವಿಯ ಮೊಗದಿ.
ತನ್ನಾತ್ಮಶಕ್ತಿಯನು ನರನ ಹರಣಕೆ ಎರಕ
ಹೊಯ್ಯುತಿಹಳೇನೊ–ಎನುವಂತೆ ಸಿರಿಮೊಗದಲ್ಲಿ
ಶಾಂತ ನಿರ್ಮಲ ತಿಳಿಯ ಕಳೆಯೆದ್ದು ಶೋಭಿಸಿರೆ,
ಪುತ್ಥಳಿಯ ಸಾಲಭಂಜಿಕೆಯಂತೆ ಕಾಣುವಳು.
ತಾಸುಗಟ್ಟಲೆಯಾಗಿ ನಡೆಯಿತಾ ಶುಶ್ರೂಷೆ! ೩೦
ಕಡಿದ ನೆತ್ತರ ನಾಳವನು ಬಿಗಿದು, ಊಜುತಿಹ
ಧಾರೆಯನು ನಿಮಿಷದೊಳೆ ತಡೆದನಾದರು ವೈದ್ಯ
ನಾಡಿಗಳ ಗತಿಯಿಲ್ಲ; ಎದೆಯ ಬಡಿತವೆ ಇಲ್ಲ;
ಕಾಯ ಬಿಸುಪೇರಿಲ್ಲ; ಕಪ್ಪಿಟ್ಟ ಮೊಗದಲ್ಲಿ
ಮರಳಿ ಕಳೆಗೂಡಿಲ್ಲ; ಉಳಿವ ನಂಬುಗೆಯೆಲ್ಲಿ?
ಸರ್ವಾಂಗದಂಗಾಂಗಗಳ ನಾಡಿ ನಾಡಿಯನು
ಸೂಕ್ಷ್ಮವಧಾನದಲಿ ಪರಿಕಿಸಿದನಾ ವೈದ್ಯ!
ನೆತ್ತಿಯಲಿ ನೂಲೆಳೆಯು ನಸುವಲುಗುವಂದದಲಿ
ಮಿಡಿಯುತಿಹ ಕಿರಿಯ ನಾಡಿಯನೆಂತೊ ಮನದಂದು
ಅದರ ಜಾಡನು ಹಿಡಿದು ಮುಂಬರಿಯಲದು ಹಣೆಯ ೪೦
ಹಾದು ಮುನ್ನಡೆದು ಕೆನ್ನೆಯೊಳಿಂಗಿ ಸೇರಿತ್ತು.
ಜೀವವಿದೆ–ಎಂಬುದರ ಕುರುಹು ಇನಿತೇ ಹೊರತು
ಬೇರಿಲ್ಲ; ತಳುವಿದರೆ ಉಳಿಗಾಲವೇ ಇಲ್ಲ!
ಹಿಳಿದ ಕಬ್ಬಿನ ಸಿವುರಿನಂತೆ ಸೋರಿದ ದೇಹ
ನೆತ್ತರಿಲ್ಲದೆ ಬಿಳಿಚಿ ಹೋಗಿತ್ತು! ಮೂಲಿಕೆಗೆ
ಮಿದಿಯುದಾ ಕಾರ್ಯವದು! ರಗುತದುಂಬಲು ಬೇಕು.
ತತ್ತರಿಕೆ ಕಳವಳಂಗಳ ಸೆಳಲು ಮೊಗದಲ್ಲಿ

ತೀವಿತಾ ವೈದ್ಯನಿಗೆ!
"ಯಾರು ನೆತ್ತರ ದಾನ
ಕೊಡುವವರು? ದಾನಿಗಳು, ಚಾಗಿಗಳು, ಮುಂಬರಲಿ! ೫೮
ಅಗ್ರಜಾನುಜರಾಗಬೇಕು. ನೆತ್ತರ ಗುಣಕೆ
ಕಣಕಣಕೆ ಸಾಮ್ಯವಿರಬೇಕು. ಸಮದಪ್ಪಿದರೆ
ಕೊಟ್ಟ ನೆತ್ತರೆ ವಿಷಮವಾಗುವುದು." ಎಂದೊರೆದ
ವೈದ್ಯವರನಾ ನುಡಿಯು ಬಭ್ರುವಾಹನ ಕೇಳಿ-
"ಕೊಳ್ಳೆನ್ನ ನೆತ್ತರನು ಉಳುಹೆನ್ನ ತಾತನನು
ತಾಯ ಸಂಪ್ರೀತನನು."
ಎನೆ, ವೈದ್ಯವರನೆಂದ-
"ಹೊಂದಲಾರದು ಕಂದ, ನಡು ಹರೆಯದೀ ದೇಹ
ಧಮನಿಗಳು; ನಿನ್ನೆಳೆಯ ತಿಳಿರಗುತ ಫಲವಿಲ್ಲ."
ದೇವಿ ಚಿತ್ರಾಂಗದೆಯು ಕೇಳಿ ಚಮಕಿತಳಾಗಿ ೬೦
"ವೈದ್ಯವರ, ಎನ್ನ ಪೂರ್ಣಾಯುಸ್ಯನಿಧಿಯೊಡನೆ
ಕೊಳ್ಳು ಕೊಳ್ಳೆ"ನಲೊಡನೆ "ಆಗದಾಗದು ತಾಯಿ!
ರಕ್ತಸಂಬಂಧ ಬಾಂಧವ್ಯ, ಮಗುಳಾಹಾರ-
ದಭ್ಯಾಸಗಳಲಿ ಗಾಯಾವಿಗೆ ಸರಿತೂಕ-
ದವರೆ ದಾಸಿಗಳಾಗಲಿಕೆ ಸಾಧ್ಯ." ಎಂದೊರೆಯೆ
"ಆಗದೆನ್ನದಿರನ್ಯ ಗತಿಯಿಲ್ಲ, ಬಾಂಧವ್ಯ-
ವೆನಗಿಹುದು. ಮಿಕ್ಕ ಸಂಗತಿಯು ಬಿಡು, ತಳುವದಿರು.
ರಕ್ತದಾನವ ನೀಡು ಜೀವದಾನವ ಮಾಡು."
ಎಂದು ಯಾಚಿಸೆ,
"ದೇವಿ! ನಿಮ್ಮ ಚಾಗದ ಮೈಮೆ ೭೦
ಹಿರಿದಹುದು! ಆದರೂ, ಕೊಡುವನಿತು ಮೈಯಲ್ಲಿ
ಕಸುವಿಲ್ಲ. ತುಂಬಿದೊಡಲಲ್ಲಮ್ಮ ನಿಮ್ಮದಿದು.
ಒಂದು ಹರಣವನುಳಿಸೆ ಇನ್ನೊಂದ ಕಡೆಗಣಿಸೆ-
ವೈದ್ಯ ನೀತಿಯೊಳಿಲ್ಲ" ಎನಲು,

ಭಾವೋತ್ಕರದಿ–
"ಮಿಕ್ಕ ಯೋಚನೆ ಬೇಡ ವೈದ್ಯವರ! ಬಲ್ಲೆ ನಾ
ತ್ಯಾಗಕ್ಕೆ ಸಿದ್ಧವಹ ನಿಷ್ಕಾಮ ಬುದ್ಧಿಯೇ
ಯೋಗವೆಂಬುದನು. ಮತ್ತದರ ಪರಿಣಾಮಕ್ಕೆ
ದೇಹಶಕ್ತಿಯು ನೆರವ ಕೇಳ್ವರಿಯೆ! ಸಾಕಿನ್ನು,
ಹಿಳಿಸೆನ್ನ ನೆತ್ತರನು ಉಳಿಸೆನ್ನ ಭಾಗ್ಯವನು." ೮೦
ಎಂದ ಚಿತ್ರಾಂಗದೆಗೆ ವಿನಯದಲಿ ಹೇಳಿದನು.
"ತಾಯೆ, ನೀವೆಂದ ನುಡಿ ತತ್ತ್ವಕ್ಕೆ ಸರಿಯಹುದು.
ಆದರೆಮ್ಮ ವೈದ್ಯಕೀಯದಲಿ ಅದು ಗೌಣ!
ದೇಶ ಪ್ರಮಾಣವೇ ಮುಖ್ಯ! ಆದರು ಇಂದು
ಬೇರೆ ದಾರಿಯೆ ಇಲ್ಲ; ದೈವ ಕಾಯಲಿ ನಿಮ್ಮ
ನುಭಯರನ್ನೂ!" ಎಂದು ಸಮ್ಮತಿಯ ನೀಡಿದನು.
ಅವಳ ಬಲತೋಳ ನೆತ್ತರ ನಾಳವನು ಕಡಿದು
ನರನ ಗಾಯದ ಬೃಹತ್ಧಮನಿಯನು ತೆರೆದು
ವರ ಮೃಣಾಳದ ನಾಳವನು ಪ್ರಣಾಳಿಕೆ ಗೈದು
ಸಂಧಿಸಿದನಹಹ! ಕೈಚಳಕವೇನಮಮ! ಹನಿ ೯೦
ಬಿಂದು ಚೆಲ್ಲದ ಹಾಗೆ ಹರಿಸಿದನು ನೆತ್ತರನು
ಶಿರಕೆ ಲೆಪ್ಪವ ಪೂಸಿ ಕೆರಳಿಸಿ ಸುಷುಮ್ನೆಯನು.
ಕ್ಷಣಗಳುರುಳಿದವು ನಾಲ್ಕಾರೆಂಟು; ಚಣ ಚಣಕೆ
ತಣಿವು ತಗ್ಗಿತು ನರನ ಜಡದೇಹ – ದೇವಿಗೂ
ಬಿಸುಪುಗುಂದಿತು ನಿಮಿಷನಿಮಿಷಕ್ಕೆ ಪುಣ್ಯವಪು.
ನೊಗೆದು ಬರಿದಹ ಬಾವಿಯಂತೆ, ತೀರ್ಥೋದಕವ
ಸುರಿಸುರಿದು ತೆರವಾದ ವರ ಕಮಂಡಲದಂತೆ,
ತೇದಂತೆ ತಾನಾಗಿ ಸವೆವ ಚಂದನದಂತೆ,
ಮುಂಬೆಳಗಿನಲಿ ಚಂದ್ರಕಲೆಯಂತೆ, ಆವಿಯನು
ಕಳುಹಿ ಆರುವ ಸರೋವರದಂತೆ, ತೊಗಟೆ–ಎಲೆ ೧೦೦
ಬೇರುಗಳ ಸಹಿತ ಸರ್ವಾಂಗದಾನವ ಕೊಟ್ಟು

ಬಾಡುತಿಹ ಮೂಲಿಕೆಯು ಗಿಡುವಂತೆ, ತೀರುತಿಹ
ಎಣ್ಣೆಯಲಿ ಉರಿವ ದೀವಿಗೆಯಂತೆ, ಕುಂದುತಿಹ
ಉತ್ಸಾಹದಲ್ಲಿ ಚೇತನದಂತೆ, ಚಣಚಣಕೆ
ಕಂದುತಿರೆ ಕುಂದುತಿರೆ, ಬಾಡಿ ಬರಿದಾಗುತಿರೆ,
ಮೊಗದಲ್ಲಿ ಮಂದಹಾಸದ ಮಿನುಗು ಮಿರುತಿದೆ.
ಸುಪ್ರಸನ್ನತೆ, ನಿಶ್ಚಲತೆ, ನಿಸ್ಪೃಹತೆ, ತನ್ನ
ಕೊಡುಗೆ ಫಲಿಸುವುದ ಕಾಂಬಾಸಕ್ತಿ, ತನ್ನತನ
ತೊರೆದಿಹ ವಿರಕ್ತಿ, ನಲ್ಮೆಯೆ ದೈವವೆನುವಂಥ
ಭಕ್ತಿ, ಆರಾಧನೆಯ ಶಕ್ತಿ, ಆವಿಷಮುಕ್ತಿ, ೧೧೦
ಶ್ರೀಮುಖದಿ ಮೂಡಿರಲು ಬಳಲಿ ಎರಡಾವೃತ್ತಿ
ಮೂರನೆಯ ಬಾರಿ ಬವಳಿದಳು; ನೈದಿಲೆಯನ್ನು
ನುಲಿದು ಚೆಲ್ಲಿದ ಹಾಗೆ ಕುಸಿಯೆ, ಪಾರ್ಥನ ಉಸಿರು
ಉಚ್ಛ್ವಾಸದಲಿ ತೊಡಗಿ ನಿಃಶ್ವಾಸ ಹೊರನಂಟು
ಕಂದೆರೆಯಲಾಗಲೇ ಕಣ್ಮುಗಿದಳಾ ಸಾಧ್ವಿ!
ಒಡನೆ ನೆತ್ತರ ಚಿಲುಮೆಗಿಟ್ಟ ತಾವರೆ ದಂಟ
ತೆಗೆದು ಧಮನಿಯ ಬಿಗಿದು ಕಟ್ಟಿದನು ವೈದ್ಯವರ
ಮೂಲಿಕೆಯನರೆದಿಟ್ಟು! ಆದರೂ ವಿಸ್ಮೃತಿಯ
ಗಾವಳಿಯನೊಡೆಯಲಿಲ್ಲಾ ದೇವಿ! ವದನದಲಿ
ಯೋಗದರ್ಶನದಿ ತನ್ಮಯನಾದ ಋಷಿವರನ ೧೨೦
ಸುಪ್ರಶಾಂತಿಯ ಸಮಾಧಿಯ ಗಾಢತೆಯ ಹೊಗರು
ಮುದ್ರಿಸಿದ್ದಿತು.
ಅತ್ತ ಪಾರ್ಥನಿಗೆ ನಡೆದೆಲ್ಲ
ವೃತ್ತಾಂತವನು ಸುತ್ತಣವರುಸಿರಿದರು. ಇತ್ತ
ಚಿತ್ರಾಂಗದೆಯ ಸೇವೆ ಶುಶ್ರೂಷೆಯಲಿ ವೈದ್ಯ
ವ್ರಾತವೇ ತೊಡಗಿತ್ತು.
ಅಂದಿಗೆಂಟನೆ ದಿನಕೆ
ಸರ್ವಶುಶ್ರೂಷೆಗಳ ವ್ಯರ್ಥವಾಗಿಸಿ ದೇವಿ

ಪರದಿತ್ತಣೆನಪಾರ ಸಾಗರತರಂಗದಲಿ
ಈಜುತಿರೆ ನೆರೆದವರು ಮಲಮಲನೆ ಮರುಗಿದರು. ೧೩೦
ಬಭ್ರುವಾಹನ ತಾಯ ಕಾಲ್ವಿಡಿದು ಕರೆಕರೆದು
ಕಿರುಗೂಸಿನಂತೆ ಹಲುಹಲುಬಿ ಗೋಳಾಡಿದನು.
ನಡೆವನಿತು ನುಡಿವನಿತು ಅರ್ಥ ಗುಣಮುಖನಾದ
ನರನು ಪಶ್ಚಾತ್ತಾಪದಗ್ಧಮಾನಸನಾಗಿ
ಪಲ್ಲಂಗದಿಂದೆದ್ದು ಚಿತ್ರಾಂಗದೆಯ ಮಂಚ-
ದೆಡೆಗೆ ಮೆಲ್ಲನೆ ಬಂದು ಕೆಡೆದ ದೇವಿಯ ಪುಣ್ಯ
ಮೂರ್ತಿಯನ್ನೀಕ್ಷಿಸಲು, ಏನು ಮಾಯೆಯೊ! ಎಂಥ
ವಿಸ್ಮಯವೊ! ಇಂಗಿದ್ದ ನೆನಹೆದ್ದು ತಾನಾಗಿ
ಮರಳಿ ಮುದ್ರಿತವಾಯ್ತು ಚಿತ್ತಭಿತ್ತಿಯ ಮೇಲೆ!
ಅಕಟಕಟ ಮತ್ತವನ ಗೋಳ ಕೇಳುವುದೇನು? ೧೪೦
ಒಂದುಸಿರಿಗೇ "ದೇವಿ-ಚಿತ್ರಚಿತ್ರಾ!" ಎಂದ
ಕ್ರಂದನವೆ ನಿಡಿದಾಗಿ ಅರಮನೆಯ ತೀವಿತ್ತು.
"ಓ ಪ್ರಾಣನಾಯಕೀ ಓ ಕ್ಷಮಾದಾಯಕೀ,
ಸುಟ್ಟ ವಿಧಿಯಯ್ಯಯ್ಯೊ ಎನ್ನ ಕೈಯಿಂದಿಂತು
ಏನ ಮಾಡಿಸಿತಕಟ! ನೀನು ಮಾನವಿಯಲ್ಲ;
ಸ್ವರ್ಗೀಯ ದೇವತೆಯು! ಪ್ರೇಮವಮರವು-ಎಂಬ
ಸಂದೇಶವನು ಸಾರಿ ನಡೆಗಲಿಸೆ ಅವತರಿಸಿ
ಇಳೆಗಿಳಿದ ದಿವ್ಯ ದೇದೀಪ್ಯತೆಯ ಮಾತೃಕೆಯು!
ಪ್ರಾಣಪದಕವೆ ನಿನ್ನ ಹೊಂದಿ ಬಾಳುವ ಋಣವ
ನಾನೆ ಪಡೆದಿಲ್ಲ; ಓ ಚಿನ್ನ! ಕಣ್ಣೆವೆದೆರೆಯು! ೧೫೦
ಪಾಪಿದೇಹದ ಮೇಲೆ ಪಾವನಕಟಾಕ್ಷವನು
ಹಸರಿ ತೊಳೆಯಾ-ದೇವಿ ಕಣ್ದೆರೆಯು!" ಎನ್ನುತಿರೆ,
ಪತನವಾಗುವ ಉಲ್ಕೆ ಸುಪ್ರಕಾಶಿಸುವಂತೆ,
ತಂತಿಗಡಿಯುವ ವೀಣೆ ಸರವೇರಿ ಬಿರಿವಂತೆ,
ಅಸ್ತಾಂಬುಧಿಯ ನೇಸರೊಪ್ಪಾಗಿ ತೊಳಪಂತೆ,

 

ನಾಗಿ ಬೀಗುತ ಉದುರಲೆಂದಿದ್ದ ತನಿವಣ್ಣು
ಬಣ್ಣವೇರುತ ಕಣ್ಣ ಸೆಳೆವಂತೆ, ಮುಳುಗುತಿಹ
ನೌಕೆ ಸುಳಿಗುಂಡಿಯಲಿ ವೇಗದಲಿ ಚಲಿಪಂತೆ,
ಸಿಡಿದೊಡೆವ ಮೊದಲು ತೂಲದ ಕೋಶ ಕೆಲಬಲಕೆ
ಪವನಹತಿಯಲಿ ತೂಗಿ ಅಣೆವಂತೆ, ರೆಕ್ಕೆಯನು ೧೬೦
ಎತ್ತಿ ಹಾರಲು ಸಿದ್ಧವಾದ ಸುಣ್ಚರವಕ್ಕಿ
ಸರವೆತ್ತಿ ಕೆಲೆದೊಮ್ಮೆ ಪಕ್ಕವನು ಬಡಿವಂತೆ,
ತೀವಿ ತುಂಬುವ ವೇಳೆ ನೀರೊಳದ್ದುವ ಕೊಡವು
ಹಿರಿದಾಗಿ ಗುಳುಗುಳೆನ್ನುವ ಸದ್ದಗೈವಂತೆ,
ಸಿಂಜಿನಿಯನುಳಿದು ಧಾವಿಪ ಶರವು ರಂಯ್ಯೆಂದು
ದನಿಪೊಣ್ಮುವಂತೆ, ಸೊಡರಾರೆ ಹಿರಿದಪ್ಪಂತೆ,
ಗುಪ್ತವಾಗಿಹ ಸತ್ಯ ಕಟ್ಟಕಡೆ ಗಳಿಗೆಯಲಿ
ಘನಮಹೋನ್ನತವಾಗಿ ಜನಜನಿತವಪ್ಪಂತೆ,
ಯೋಗೋತ್ಕರದ ಸಮಾಧಿಗೆ ಸಲುವ ಮುನಿವರನು
ಶಿಷ್ಯರಿಗೆ ಕೊನೆಯ ಸಂದೇಶವನು ಕೊಡುವಂತೆ ೧೭೦
ಒಂದು ಗಳಿಗೆಗೆ ದೇವಿ ಕಣ್ಣ ತೆರೆದಳು; ತೆರೆದು
ತನ್ನಿನಿಯನನು ನೋಡಿ ನಗುಮಲ್ಲಿಗೆಯ ಮುಗುಳ
ಚೆಲ್ಲಿದಳು. ಕಣ್ಣ ಕಾಂತಿಯ ಕಿರಣ ನೀಡಿರಲು,
"ವಲ್ಲಭಾ ದಯೆ ಬಂತೆ?"–ಎಂದು ಕೇಳಿದಳು. ಕೃತಿ
ಧನ್ಯತೆಯ ಭಾವ–ಸಂತೃಪ್ತಿಪೂರಿತ ನುಡಿಯ
ಪ್ರೇಮಾರ್ದ್ರಗೊಳಿಸಿ ಬೆಸಗೊಳಲು, ಕಾರುಣ್ಯರಸ
ಘಟವೊಡೆದು ಹರಿದಂತೆ, ನರನೆದೆಯ ಗುಂಡಿಗೆಯ
ತಿವಿದಂತೆ ಸ್ಯೈರಣೆಯನೀಡಾಡಿ ಗಳಗಳನೆ
ಕಣ್ಣೀರ ಸುರಿಸಿದನು.
ಬಭ್ರುವಾಹನ ಕೈಯ ೧೮೦
ಜೋಡಿ ಗದ್ಗದನಾಗಿ "ತಾಯೆ, ಹರಕೆಯದೇನು?"
ಎಂದು ಬಿಕ್ಕಳಿಸಿ ಕೇಳಿದನು. ಕಂದನ ಕಂಡು

ತಂದೆಯಡಿಗೆರಗೆಂದು ಸನ್ನೆಯನು ಮಾಡಿದಳು.
ಬಭ್ರುವಾಹನನೊಡನೆ ಪಾರ್ಥನಡಿಗಳಿಗೆರಗಿ
"ಪಿತನೆ ಅಪರಾಧಗಳನೆಲ್ಲ ಮನ್ನಿಸಬೇಕು."
ಎಂದು ಬೇಡಲು ನರನ ಕಣ್ಣ ಧಾರೆಯೆ ಅವನ
ಉತ್ತರವ ಕೊಡುವಂತೆ ಹೊಯ್ದಿಡಲು, ಕರುಳನ್ನೆ
ಕತ್ತರಿಸಿದಂತಾಗೆ ಕೈಗಳೆರಡನು ನೀಡಿ
ಎತ್ತಿ ತಲೆಯನು ಸವರಿ ತಬ್ಬಿದನು ಕಂದನನು.

ಸ್ವರ್ಗೀಯ ದೃಶ್ಯವದು ದೇವಿ ಚಿತ್ರಾಂಗದೆಗೆ ೧೯೦
ಕಂದನೆಂದೊಪ್ಪಿದಾ ಗಳಿಗೆ. "ಪಾವನಳಾದೆ!
ಹೊಲ್ಲೆಯಾರೋಪಣೆಯು ಹೋಗಲಾಡಿಸಿದೆ!" ಎನೆ
ಕಣ್ಣ ಕೊನೆಯಲಿ ಅಶ್ರುಬಿಂದುಗಳು ಉರುಳಿದವು.
ಅದುವೆ ಆನಂದಾಶ್ರು! ಪೂರ್ಣಯೋಗದ ಸಿದ್ಧಿ-
ಯಲಿ ಮೂಡುವಾನಂದ ಪುಳಕಾಶ್ರು! ಪೂಮಳೆಯು!
ಬಲದ ಕೈಯಲಿ ಪತಿಯ, ಎಡದ ಕೈಯಲಿ ಸುತನ,
ಕರಗಳನು ಹಿಡಿದು ಜೋಡಿಸಿ ಪತಿಯ ಬೊಗಸೆಯಲಿ
ಬಭ್ರುವಾಹನನ ಕೈಯನ್ನಿರಿಸಿ ಹೇಳಿದಳು-
"ಸ್ವಾಮಿ, ಬದುಕಿರುವಾಗ ತಂದೆ ಮಕ್ಕಳ ನಿಮ್ಮ
ಪ್ರೀತಿಯಕ್ಕರೆಗಳನು ಕಂಡು ತಣಿಯುವ ಭಾಗ್ಯ ೨೦೦
ಹಣೆಯೊಳೆನಗಿಲ್ಲವಾಗಿತ್ತು. ಆದರು ಮುಂದೆ,
ಆರು ಮೂರರಿಯದಾ ಹಸುಳೆಯಿಸ್ನೂ ಕಂದ,
ಕೈವಿಡಿದು ಮುನ್ನಡೆಸುವುದು! ಕೃಪಾ ಛತ್ರದಡಿ
ನೆಳಲಾಸರೆಯನಿತ್ತು ತಲೆಬೆನ್ನ ಕಾಯುವುದು!
ಈ ಬೇಡಿಕೆಯನೆನ್ನ ಸ್ವಾಮಿ ಸಲ್ಲಿಸಬೇಕು."
ಎಂದು ಕಣ್ದುಂಬಿದರೆ ಯಾರು ನೋಡಲುಬಹುದು?
ಆ ನೋಟವಕಟಕಟ! ಎಂತು ಸೈರಿಸಬಹುದು?

ಪಾರ್ಥನಿಗೆ, ಕುವರನಿಗೆ, ಕೂಡಿದವರಿಗೆ ಸುತ್ತು
ಸೈರಣೆಯು ತಡಿಯೊಡೆಯುದೇ? ತಡೆವ ತೆರನೆಂತು?
ದುಷ್ಟ ಕಂಠದ ಉಮ್ಮಳದ ಶೋಕಭಾರದಲಿ                    ೨೧೯
ನತವದನನಾಗಿ ಮಾತಿಲ್ಲದಾದನು ಮೊದಲು.
"ದೇವಿ ದೇವೀ, ಮಂಗಳಾಂಗಿ, ಪದಿಬದೆ ಚಿನ್ನ!
ಸರ್ವಾಪರಾಧವನು ಕ್ಷಮಿಸೆನ್ನ" ಎಂದಿಷ್ಟೆ
ಹೊರತಾಗಿ ಬೇರೆ ಮಾತೆಲ್ಲ ಗದ್ಗದವಾಯ್ತು!
ತಂದೆ ಮಕ್ಕಳ ಪುನರ್ಮಿಲನವನು, ಅಂತೆ ಆ
ಮೊದಲ ಮಿಲನವನು ಕಣ್ದುಂಬಿ ದಿಟ್ಟಿಸಿ, ದಿವ್ಯ
ದೃಶ್ಯದಾನಂದ ಆತ್ಮಾನುಭೂತಿಯು ಪಡೆದು,
ಕ್ಷಣಕಾಲ ಕಣ್ಮುಚ್ಚಿ ಎದೆಯ ತುಂಬಿಸಿಕೊಂಡು,
ಕಣ್ದೆರೆದು ದೇವಿ ಪಾರ್ಥನ ಯಾಚಿಸಿದಳಿಂತು.
"ಪ್ರಭುವೆ, ಬಾಯಾರುತಿದೆ; ನಿಮ್ಮಮೃತಹಸ್ತದಲಿ,                    ೨೨೦
ಅಂತೆ ಕಂದಾ ನಿನ್ನ ನಿಷ್ಪಾಪಹಸ್ತದಲಿ,
ತಣಿಸಿರರತೆಯನು, ಹರಿಸಿರಿ ಒಲವಿನೊರತೆಯನು."
ಎನೆ, ಕಮಂಡಲದ ಲಾವಂಚದೊಳ್ಪಿನ ಜಲವ
ತಂದೆ ಮಕ್ಕಳು ಹಿಡಿದು ನಸುವಾಗಿ ಸುರಿಸುರಿಯೆ,
ಆಹ! ಇನಿಯನ ಕೈಯ ಅಂತೆ ಕಂದನ ಕೈಯ
ಪ್ರೇಮ ವಾತ್ಸಲ್ಯಗಳ ಅಮೃತಧಾರೆಯ ಕುಡಿದು
'ಧನ್ಯಳಾದೆನು'— ಎಂಬ ಪುಣ್ಯಭಾವವು ಪೊಣ್ಮೆ
ಕಣ್ಮುಗಿದಳಾದೇವಿ ಜಗಕೆ ಕತ್ತಲ ಕವಿಸಿ.
        ಮಾಯೆಯನು ಗೆದ್ದೊಡ್ಡು ನಡೆವಾತ್ಮಶ್ರೀಯಂತೆ,
ಮೋಹಾಮಿಷವ ಗೆಲ್ವ ವೈರಾಗ್ಯದಂತೆ, ಬಿರು                    ೨೩೦
ಗಾಳಿಯಲಿ ತೆವಳುತಿಹ ನೌಕೆ ದಡ ಸೇರ್ವಂತೆ,
ದೂರದೂರಿಂ ಮನೆಗೆ ಯಾತ್ರಿಕನ ನಡೆಯಂತೆ,
ಬಂಧವನು ಕಡಿದ ಬಿಡುಗಡೆಯಂತೆ, ಸೌಂದರ್ಯ
ಕಂಡು ಧಾವಿಪ ಕಲಾವಿದನಂತೆ, ರಸಕೆ ವಶ-

ನಾದ ಕವಿವರನಂತೆ, ತಾಯ ತೆಕ್ಕೆಗೆ ಚಿಗಿವ
ಶಿಶುವಂತೆ, ಧನುವಿಂದ ಗುರಿಗೆ ಓಡುವ ದಿವ್ಯ
ಶರದಂತೆ, ಸಾರ್ಥಕ್ಯಸೀಮೆಯನು ಸೇರುತಿಹ
ಸಾಧನೆಯ ವಿಧಿಯಂತೆ, ಹಸುರು ಹಸಲೆಯ-ನೆಲೆಗೆ
ಹಸುವಂತೆ, ಪಾವಿತ್ರ್ಯದೆಡೆ ಶುದ್ಧಿಯಂತೆ, ಜಲ-
ನಿಧಿಯತ್ತಣಕೆ ಹರಿವ ಜಾಹ್ನವಿಯ ಹೊನಲಂತೆ, ೨೪೦
ದೇಹಪಂಜರದ ತನ್ನಾತ್ಮಶುಕವನು ದೇವಿ
ಮೋಕ್ಷನಂದನದ ವಿಸ್ತಾರದಲಿ ವಿಹರಿಸಲು
ಹಾರಬಿಟ್ಟಳು- ಅಸ್ತಮಾನ ಕಾಲೋದಯಕೆ!

[ನೋಟ ಎಂಟು]

ಅದೋ ಯಾತ್ರೆ! ಜನರ ಜಾತ್ರೆ, ಆ ಶ್ಮಶಾನದೆಡೆಗೆ ಯಾತ್ರೆ!
ಮಣಿಪುರದಾ ಮಹಾರಾಣಿಯನ್ನು ಹೊತ್ತ ಮೆರವಣಿಗೆಯ
ಸೇರಿ ನೆರೆದ ಸಂದಣಿ ಜನ! ಲೆಕ್ಕ ಸಂಖ್ಯೆಯೆಂಬುದಿಲ್ಲ.
ಹಿರಿಯರೆಂದು ಕಿರಿಯರೆಂದು ಬಡವರು ಬಲ್ಲಿದರು ಎಂದು
ಭೇದವಿಲ್ಲ–ಹೆಣ್ಣು ಗಂಡು ಕುರುಡ ಕುಂಟ ಹೆಳವನೆಂದು.
ಹಾದಿಗಳಲಿ ಬೀದಿಗಳಲಿ ಹರದರಂಗಡಿಗಳ ಮುಂದೆ
ಸದ್ಮ ಸೌಧ ಕೋಟೆ ಕೊತ್ತಲಗಳ ಮೇಲೆ, ಸಾಲು ಮರದ
ಗೆಲ್ಲುಗಳಲಿ ಕೂಡಿದ ಜನ ಕುಸುಮಗುಚ್ಛಗಳನು, ಪುಷ್ಪ
ಮಾಲೆಗಳನು ಹೂಗಳನ್ನು ಚೆಲ್ಲಿ ಎಸೆದು ಹಾರಿಸುತ್ತ
ಹೂವು ಮಳೆಯ ಕರೆದರು.

ಕೈಯ ಮುಗಿದು ಹರಸಿ ಬೇಡಿ ಗೋಳಿಡುವಾಕ್ರಂದನವೇ-
ಮರಣವಾದ್ಯ! ಮೆರವಣಿಗೆಯು ರಾಜವೀಥಿಗಳನು ಹಾದು,
ನಗರವನ್ನು ಸುತ್ತಿ ಸಾಗಿ ಮುಂದುವರಿಯೆ, ಸಂದಣಿ ಜನ
ಜಲಧಿಯ ತೆರೆ ಮೊರೆಯೆ ಮೊರೆಯೆ ಚರಮಗೀತ ಶಾಂತಿಘೋಷ-
ವಾಗಿ! ಮುಂದೆ ಮುಂದುವರಿದು ಯೋಜನಾಂತರದಲಿ ಗಂಗೆ
ತಡಿಯ ಮೇಲೆ, ಒಗರ್ವಾವೃದ ಚಿತ್ತರವನು ಕಂಡು, ಅಲ್ಲಿ
ಗಂಧ ಚಂದನಗಳ ಚಿತೆಯ ಕಟ್ಟಿ, ಅಗರು ಧೂಪವೊಟ್ಟಿ,
ಕತ್ತುರಿಯನು ಚೆಲ್ಲಿ, ಪುಣ್ಯದೇಹವನ್ನು ವೇದಮಂತ್ರ
ಘೋಷದೊಡನೆ ಮಲಗಿಸಿದರು; ಮತ್ತೆ ಮೌನ ಕವಿಯಿತು.
ಶೋಕಭಾರದಿಂದ ಸಂಜೆವೆಣ್ಣು ಕೆಚ್ಚನಾಗಿರುವಳೊ!
ಎನ್ನಲು ಓಕುಳಿಯ ನೀರ ಎರಚಿದಂತೆ ಪಡುವಲಲ್ಲಿ
ಕೆಂಪು! ರುದ್ರ ಭೀಷಣತೆಯ ದುಃಖದ ಸಂಕೇತವಾಗಿ,
ಜವನ ವೈಜಯಂತಿಯಂತೆ, ನೆತ್ತರನ್ನು ಹೀರಿ ಬಂದ
ಮೃತ್ಯು ಕುಡಿದು ಕಾರಿದಂತೆ, ಮತ್ತವಾದ ಭೂತಗಣದ
ರಕ್ತವರ್ಣವೆದ್ದ ಕಣ್ಣ ಕಿರಣದಂತೆ ತೋರಿತು.
ಹಕ್ಕಿಗಳದೊ ಇರ್ಕೆಯೆಡೆಗೆ ಹಾರುವಾಗ ಚಿಲಿಮಿಲಿಯನು
ನಿಲ್ಲಿಸಿ, ಚಿತೆಗೊಂದು ಸುತ್ತು ತಿರುಗಿ ಮತ್ತೆ ಮೊದಲಿನಂತೆ
ಹಾರುವಾಗ ಉಲಿಯಲಿಲ್ಲ. ಹೊನಲು ಮೌನವಾಗಲೆಂದು
ಸದ್ದನೆಲ್ಲ ನುಂಗುತಿರಲು ಕೊರಳು ಬೀಗಿ ನಿಮಿರುವಂತೆ
ವಲಿಗಳೆದ್ದು ಜಾರಿತು.

ಹೊಳೆಯ ಗಬ್ಬಕೊಂದು ಬಾಣ ಹೊಕ್ಕ ಹಾಗೆ ಕೊಕ್ಕು ನೀಡಿ
'ಟುಳುಂ'ಕೆಂದು ಮುಳುಗಿ ಮೀನ ಕಚ್ಚಿಹಿಡಿದು ಮೇಲೆ ಬಂದ
'ಮೀನ ಚುಳ್ಳಿ' ಹಕ್ಕಿ ಚಿತೆಯ ನೋಟ ಕಂಡು ಅಚ್ಚರಿಯಲಿ
ಚಂಚುದೆರೆಯೆ ಜಾರಿ ಬಿದ್ದ ಮತ್ಸ್ಯವನ್ನು ಮರೆತು, ನಡೆದ
ವೃತ್ತವನ್ನು ಅಪ್ಸರೆಯರ ಕೇಳಿ ತಿಳಿಯಲೆಂದು ಬಾನ–
ಸೇರಿತೇನೊ ಎನ್ನುವಂತೆ ಚಿಮ್ಮಿ ಚಿಗಿದು ಹಾರಿತು!

ಮೂರು ದಿಕ್ಕಿನಲ್ಲಿ ಸುತ್ತ ಕಣ್ಣ ನೋಟ ಹೋಗುವನಕ
ದೂರದಂತರವನು ತುಂಬಿ, ತುಂಬುಗಣ್ಣ ತುಂಬಿದೆದೆಯ
ಸಾರ್ವಜನಿಕ ವೃಂದವಿರಲು, ವಿಶ್ವಜಿತ್ತು ಯಜ್ಞದಲ್ಲಿ
ಪೂರ್ಣ ಬಲಿಯನುಂಡ ಅಗ್ನಿ ಜ್ವಾಲೆಯಂತೆ ನಾಲ್ಕು ಮೂಲೆ-
ಯಿಂದ ಮೇಲೆ ನೀಡಿ ಶುದ್ಧ ಹವಿಯನೆತ್ತಿ ದಿವಿಜರಿಂಗೆ
ಈಯುವಂತೆ ತೋರೆ ಚಿತೆಯು ಅಗ್ನಿಯೆದ್ದು ಉರಿಯಿತು.

* * * * * *

ಸಾಗರ ಕಲ್ಲೋಲ ವೀಚಿಗಳನು ಸೀಳಿ ತಳ್ಳಿ ತೂರಿ
ದೂರದಿಂದ ಒಮ್ಮೆ ಕಂಡು ಮರಳಿ ಮರೆಯು ಸಂದು ಮತ್ತೆ
ಮೇಲಕೇರಿ ಇಳಿದು ಕೆಳಗೆ ತನ್ನ ಸುತ್ತ ಫೇನ ರಾಶಿ-
ಯನ್ನು ಸೃಜಿಸಿ ಕುಲುಕಿ ದಡಕೆ ನೇರ ಬರುವ ನೌಕೆಯಂತೆ,
ಕಿಕ್ಕಿರಿಯುತ ಸೇರ್ದ ಜನರ ಸಂದೋಹವನಿಕ್ಕೆಲಕ್ಕೆ
ಸರಿಸಿ ವೇಗದಿಂದಲಿದಿರು ಬಂದವರನು ಒತ್ತರಿಸುತ
ಎಡಕೆ ಬಲಕೆ ದಿಟ್ಟಿಸದೆಯೆ ಚಿತೆಯು ನೇರದತ್ತಣಕ್ಕೆ
ನಾರಿಯದೋ ಓಡುತಿಹಳು! ಗುರಿಗೋಡುವ ಅಂಬಿನೋಲ್!
ಪಾರ್ಥ ಬಭ್ರುವಾಹನರಿಗೆ ಲಕ್ಷ್ಯವತ್ತ ಸೆಳೆದುಹೋಯ್ತು!
ಗೂಢವನ್ನು ಗೌಪ್ಯದಲ್ಲಿ ಮುಚ್ಚಿ, ಚೋದ್ಯ ವಿಸ್ಮಯಗಳ
ಕಟ್ಟೊಡೆದೇ ಸ್ಫೋಟವಾಯ್ತು! ಬರುತಿರುವವಳಾವಳೆಂಬ
ಅರಿವಾರಿಗು ಆಗಲಿಲ್ಲ. ಬಂದಳದೋ ಬಂದಳದೋ
ಎಂಬುದೊಂದೆ ಕಂಡಿದೆ!
ನಾರಿಯೆಂದು ದಾರಿಬಿಟ್ಟು ಸಾರಿದವರು ಕೆಲರು; ವೇಗ-
ತೀವ್ರತೆಗಳ ಭರಕೆ ಹೆದರಿ ಓರೆಯಾದರಂತು ಹಲರು;
ಹುಚ್ಚಿಯೇನೊ! ಎಂಬ ಶಂಕೆ ಮೂಡಿ ತೆರವು ಕೊಟ್ಟರಂತೆ.
ಏತಕೆಂದು ಅರಿಯದೆನೇ ಕೆಲಕೆ ಒತ್ತಿ ಬಿಟ್ಟರಂತೆ.
ಸಂದೋಹದ ನೂಕು ನುಗ್ಗು ಮುಗ್ಗಿನಲ್ಲಿ ಅದ್ಭುತವೋ
ಅಘಟಿತವೋ ಅಚ್ಚರಿಯೋ ಎಂದು ಮುಂದೆ ಬೆಗಡುಗೊಂಡು
ನಟ್ಟ ನೋಟದಿಂದ ನೋಡೆ ಲಕ್ಷ್ಯದೃಷ್ಟಿ ಏಕಕಾಲ-

ದಲ್ಲಿ ನೆಟ್ಟು ಹೋದರೇನು? ಗುರುತು ಹಿಡಿದರಿರುವರೇನು?
ಯಾರು? ಯಾರು? ಏತಕಿಲ್ಲ? ಹಿಂದೆ ಅವಳ ಕಂಡುದಿಲ್ಲ!
ಕಂಡವರಿಗು ಮರೆಯಿತೆ?
ಕೆದರು ಕೇಶ ಕನಲುಗಣ್ಣು ಮಾಸಿದುಡುಗೆಯನ್ನು ಬಿಗಿದ
ಬೀರಗಚ್ಚೆ, ಪಥಶ್ರಮದ ದಣಿವಿನ ಮೇಲುಬ್ಬುಸಗಳು!
ಬೆವರು ಕದಡಿ ಬಿಟ್ಟ ತಿಲಕ, ಕಾತರತೆಯ ಭಾವ, ಕಂದಿ-
ಹೋದ ಕಾಯ-ಇಷ್ಟೆ ರೂಪು! ಮತ್ತೆ ನೋಡೆ ಆಕೆಯು ಚಣ
ಹೊತ್ತಾದರು ನಿಲ್ವಳೇನು? ನಾಡಾವುದೊ ಊರಾವುದೊ
ಬೀಡೆಲ್ಲಿಯೊ ತಿಳಿವರಾರು? ಓಡಿದಳದೊ ಮಧ್ಯೆ! ಚಿತೆಯ
ಸನಿಹದಲ್ಲಿ ಪಾರ್ಥ ಬಭ್ರುವಾಹನಾದಿ ನಿಂದೆಡೆ!
ಗೋಳಿನರ್ಧ ಸೇಡಿನರ್ಧ ಮಿಶ್ರವಾದ ದನಿಯನೆತ್ತಿ
ತಾರ ಗತಿಯಲೆಂದಳಿಂತು– "ಧೂರ್ತ ಪಾರ್ಥ ಬದುಕಿದೆಯಾ?
ವೈರಾಗ್ನಿಯ ಯಜ್ಞಬಲಿಗೆ ವ್ಯಾಘ್ರವನ್ನು ಹಿಡಿದು ಕಡಿದು
ಬೇಳ್ವೆನೆಂದು ಗೈದ ಹೂಟ ವಿಫಲವಾಗಿ, ಮೊದ್ದು ಕಪಿಲೆ
ಬಲಿಯಾಯಿತೆ ದೈವವೆ!
"ಯತ್ನವೆನ್ನ ಫಲಿಸಿತಹುದು! ದೇವಿ ಮೈಯ ನೆತ್ತರಿಂದ
ನಿನ್ನನುಳಿಸಿ ಬಿಟ್ಟಳೆಂದು ಕೇಳಿ ಧಾವಿಸುತ್ತ ಬಂದೆ
ಯೋಜನಗಳ ನಡೆದು ನಡೆದು! ಆದರು ಆ ತಾಯ ದಿವ್ಯ
ದೇಹವನ್ನು ಕಾಂಬ ಪುಣ್ಯವಿಲ್ಲವಾಯ್ತು! ಆತ್ಮಬಲಿಯ
ತೆತ್ತು ನಿನ್ನ ಬೆಲೆಗೆ ಕೊಂಡ, ಪುಣ್ಯಮಾತೆಯುದ್ದೇಶದ
ನಿರ್ದೇಶವ ಕಡೆಗಣಿಸುವ ಕಜ್ಜವನ್ನು ಮಾಡಲಾರೆ!
ಆ ನಲ್ಮೆಯ ಬಾಳ ಭವ್ಯ ಚರಿತೆಯನ್ನು ಬೀಳುಗೊಳಿಪ
ಕೀಳು ಗೈಮೆಗೆಳಸಲಾರೆ. ಬಾಳಿಕೊಳ್ಳು ನಿನ್ನ ಹಣೆಯ
ಬರಹ ತೀರುವನಕ! ಎನ್ನ ಸೇಡನಿನ್ನು ಬಿಟ್ಟಿರುವೆನು!
ಭಗ್ನ ಯತ್ನದಂತ್ಯದಲ್ಲಿ ಸಾಧಕನೇ ಬಲಿ ಬೀಳುವ
ಗುರಿಯನೊಂದೆ ತೊಟ್ಟಿರುವೆನು. ಹೆತ್ತ ಮಕ್ಕಳನ್ನು ಕಳೆದು,
ಚಿಂತಾಗ್ನಿಯ ಮಧ್ಯೆ ಉರಿದು, ಸತಿಗೆ ಬೇಡನಾದ ಪಾಪಿ!

ಚಿತೆಗೆ ಹಾರಿ ಶುದ್ಧಿಗೊಂಬೆ!" ಎಂದು ಧಗಧಗಿಸುವ ಉರಿಗೆ
ಒಂದೊಮ್ಮೆಲೆ ನೆಗೆದಳು.
ತಡೆಯುವನಿತು ಹೊತ್ತೆ ಇಲ್ಲ! ಬೀಳ್ವಳೆಂದು ಗೊತ್ತೆ ಇಲ್ಲ!
ನಿಮಿಷದಲ್ಲಿ ಚಿತೆಯ ಮೇಲೆ ಸ್ಥಾಣುವಂತೆ, ಕೈಯ ಕಟ್ಟಿ
ಕೆಡೆದಳಕಟ! ನೀಲಕೇತು "ಅಯ್ಯಯ್ಯೋ ಜ್ವಾಲೆ!"– ಎಂದು
ಗೋಳುಗರೆದು ಕೂಗಿ ಕರೆದು ಮೂರ್ಛೆವೋಗಿ ಬಿದ್ದನು.
ಸುತ್ತಣವರಿಗೆಲ್ಲ ಆಕೆ ಜ್ವಾಲೆಯೆಂದು ತಿಳಿಯಿತೊಡನೆ.
ಹಾಹಕಾರದೊಡನೆ ಹರಡಿ ಕರ್ಣದಿಂದ ಕರ್ಣಕಾಗಿ
ಮಾತಿನಿಂದ ಮಾತು ಹುಟ್ಟಿ ಉದ್ಗಾರದ ಉಸಿರಿನಿಂದ
ಎಲ್ಲರೊಮ್ಮೆ ಏಕಕಂಠವಾಗಿ ಮೊರೆಯೆ, ಗಾಳಿ ಬೆರೆಯೆ
'ಜ್ವಾಲೆ'ಯೆಂಬ ಘೋಷ ಬಿರಿಯೆ ಅಗ್ನಿ ಮೇರೆವರಿಯಿತು.
ಜ್ವಾಲೆಯುದರ ನಡುವೆ ಅಗ್ನಿ ಗರ್ಭದೊಂದು ಪಿಂಡದಂತೆ,
ದಹನತತ್ತ್ವಸೂಕ್ಷ್ಮದಂತೆ, ಬೆಂಕಿಯ ನಡು ತಿರುಳಿನಂತೆ,
ಬೆಳಗುತಿರುವ ಹರಳಿನಂತೆ, ಜೇಂದೊಟ್ಟಿಯ ನಡುವೆ ಕಾದು
ನಿಂದ ಭೃಂಗರಾಜ್ಞಿಯಂತೆ, ಕುಲಿಮೆಯಲ್ಲಿ ಕಾದ ಹೊನ್ನ
ಗಟ್ಟಿ ಹೊಳೆದು ಶೋಭಿಪಂತೆ, ಚಿತ್ರಾಂಗದೆ ಬರೆದ ಚಾಗ
ಚಿತ್ತರವೆನೆ, ಅವಳ ಪುಣ್ಯ ಭಾರವನ್ನು ಹೊತ್ತು ದಿವಾ
ನಾರಿ ಸಗ್ಗಕೇರುವಂತೆ ತೋರುತಿತ್ತು ನೋಟವು.
"ಕ್ಷಾತ್ರತೇಜದನುರ ವೀರ ನಾರಿಯಾಕೆ ಕಂದ! ಇವಳ
ಚೇತನಕ್ಕೆ ಸೋತೆನೆ"ಂದು ಪಾರ್ಥ ಕೈಯ ಮುಗಿಯೆ, ಬಭ್ರು–
ವಾಹನನೂ ಮಣಿಯೆ, ನೀಲಕೇತುವಾಗ ಚೇತರಿಸುತ
'ಜ್ವಾಲೆ' ಎನುತ ಮರಳಿ ಮರಳಿ ಕರೆದು ಕರೆದು ಕೂಗಿ ಹಲುಬಿ
ಗೋಳಿಡುತ್ತಲಿರಲು ಅಗ್ನಿ– ಜ್ವಾಲೆಯೊಡನೆ ಬೆರೆದು ಸಾಧ್ವಿ
ಜ್ವಾಲೆ ಮೇಲೆ ಸಂದಳು.



## ಈ ಲೇಖಕರ ಇತರ ಕೃತಿಗಳು.

**ಯೋಗಲಹರಿ.** ರೂ. ೧-೫೦.
ರಸಸ್ಯಂದಿಗಳಾದ ಮೂರು ಖಂಡಕಾವ್ಯಗಳು.

**ಶಿವ ಲೇಶ್ಯೈ.** ರೂ. ೧-೫೦.
ಮಿಶ್ರಛಂದದ ಐತಿಹಾಸಿಕ ಕಾವ್ಯ.
ಮದ್ರಾಸು ಸರಕಾರದಿಂದ ಬಹುಮಾನಿತವಾದುದು.

**ವಧೂವಸಂತಸೇನೆ.** ರೂ. ೦-೭೫.
ಸಂ. ನಾಟಕ ಕಥಾವಸ್ತು ಕಥನ.

**ನಾಗವರ್ಮನ ಕಾದಂಬರಿ.** ರೂ. ೧-೦೦.
ಕನ್ನಡದ ಉತ್ಕೃಷ್ಟ ಕಾವ್ಯದ ವಸ್ತು ಕಥನ.

**ವತ್ಸ ವಿಜಯ.** ರೂ. ೦-೫೦.
ಮುದ್ದಣ ಮಹಾಕವಿಯ ಮೊದಲ ಕೃತಿಯ
ಮುದ್ದು ಕತೆ.

**ಒಡ್ಡಿದ ಉರುಳು.** ರೂ. ೧-೨೫.
ಸಾಮಾಜಿಕ ಕಾದಂಬರಿ.

ಇತ್ಯಾದಿ...